## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಮನೆ ಮನೆ ಪುನರ್ ಸಮೀಕ್ಷೆಯ ಮೂಲಕ ಗುರುತಿಸಲಾದ ಎಲ್ಲಾ ಫಲಾನುಭವಿಗಳಿಗೆ ತಾತ್ಕಾಲಿಕ ಪಡಿತರ ಕೂಪನ್‌ಗಳನ್ನು ವಿತರಿಸುವ ಬಗ್ಗೆ - ಅನುಮೋದನೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004, ದಿನಾಂಕ: 10.01.2005.

2) ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರ ಅ.ಸ. ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/II/79/2005-06, ದಿನಾಂಕ: 02.01.2006.

**ಪ್ರಸ್ತಾವನೆ:**

ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಪಡಿತರ ಚೀಟಿಯನ್ನು ಕೊಡುವಲ್ಲಿ ಕೆಲವು ಅರ್ಹ ಕುಟುಂಬಗಳನ್ನು ಕೈಬಿಟ್ಟಿದ್ದು ಹಾಗೂ ಅನರ್ಹ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿರುವುದಾಗಿ ಸಾರ್ವಜನಿಕರಿಂದ/ಜನಪ್ರತಿನಿಧಿಗಳಿಂದ ದೂರುಗಳು ಬಂದಿರುವುದನ್ನು ಗಮನಿಸಿ ಸರ್ಕಾರವು ಅನರ್ಹ ಕುಟುಂಬಗಳು ಹೊಂದಿದ ಪಡಿತರ ಚೀಟಿಗಳನ್ನು ರದ್ದುಪಡಿಸುವದಲ್ಲದೇ ಅರ್ಹ ಕುಟುಂಬಗಳಿಗೆ ಪಡಿತರ ಚೀಟಿಗಳನ್ನು ನೀಡಲು ರಾಜ್ಯಾದ್ಯಂತ ಪಾರದರ್ಶಕ ರೀತಿಯಲ್ಲಿ ಮನೆ ಮನೆ ಪುನರ್ ಸಮೀಕ್ಷೆಯನ್ನು ನಡೆಸಲು ಸರ್ಕಾರವು ಮೇಲೆ ಓದಲಾದ (1)ರ ಆದೇಶವನ್ನು ಹೊರಡಿಸಿದೆ. ಅದರಂತೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರು ಕ್ರಮ ಕೈಗೊಂಡಿದ್ದು, ಸದರಿ ಪ್ರಕ್ರಿಯೆಯು ಈಗಾಗಲೇ ಮುಕ್ತಾಯಗೊಂಡಿದೆ. ಎಲ್ಲಾ ಅರ್ಹ ಫಲಾನುಭವಿಗಳಿಗೆ ಗಣಕೀಕೃತ ಪಡಿತರ ಚೀಟಿಗಳನ್ನು ನೀಡಲು ಈ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿದ್ದು, ಅನಿವಾರ್ಯ ಕಾರಣಗಳಿಂದಾಗಿ ಈ ಪ್ರಕ್ರಿಯೆ ಸ್ವಲ್ಪ ವಿಳಂಬವಾಗುವ ಸಂಭವ ಇರುವುದರಿಂದ ಸರ್ಕಾರವು ಇದನ್ನು ಪರಿಗಣಿಸಿ ಮನೆ-ಮನೆ ಪುನರ್ ಸಮೀಕ್ಷೆಯಿಂದ ಹೊರಬಂದ ಫಲಿತಾಂಶದಂತೆ ಎಲ್ಲಾ ಅರ್ಹ ಫಲಾನುಭವಿಗಳಿಗೆ ಆಹಾರಧಾನ್ಯಗಳನ್ನು ವಿತರಿಸಲು ಅನುಕೂಲವಾಗುವಂತೆ ಪಡಿತರ ಕೂಪನ್‌ಗಳನ್ನು ನೀಡಲು ಉದ್ದೇಶಿಸಿದೆ. ತತ್ಸಂಬಂಧದಲ್ಲಿ, ಮೇಲೆ ಓದಲಾದ (2)ರ ಪ್ರಸ್ತಾವನೆಯನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರು ಸರ್ಕಾರಕ್ಕೆ ಸಲ್ಲಿಸಿ ಮನೆ-ಮನೆ ಸಮೀಕ್ಷೆಯನ್ನು ಕೈಗೊಳ್ಳುವ ಮುನ್ನ ಪಡಿತರ ಚೀಟಿಗಳನ್ನು ಹೊಂದಿದ್ದ ಕೆಲವು ಅನರ್ಹ ಫಲಾನುಭವಿಗಳನ್ನು ಕೈಬಿಟ್ಟಿದ್ದು ಅದೇ ಸಂದರ್ಭದಲ್ಲಿ ಪಡಿತರ ಚೀಟಿಯನ್ನು ಹೊಂದಲು ಅರ್ಹರಾದ ಫಲಾನುಭವಿಗಳನ್ನು ಗುರುತಿಸಿ, ಪಟ್ಟಿಯನ್ನು ಸಿದ್ಧಗೊಳಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ. ಆದರೆ, ಉದ್ದೇಶಿಸಿದಂತೆ ಗಣಕೀಕೃತ ಪಡಿತರ ಚೀಟಿ ನೀಡುವಲ್ಲಿ ಸ್ವಲ್ಪ ವಿಳಂಬವಾಗುವುದರಿಂದ ಹಾಗೂ ಈ ಹಿಂದೆ ಅನರ್ಹ ಫಲಾನುಭವಿಗಳು ಪಡಿತರ ಚೀಟಿಗಳನ್ನು ಹೊಂದಿದ್ದು ಸದರಿ ಫಲಾನುಭವಿಗಳು ಆಹಾರಧಾನ್ಯಗಳನ್ನು ನಿಯಮಿತವಾಗಿ ಪಡೆಯುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗುತ್ತದೆ ಎಂದು ಹಾಗೂ ಕೆಲವು ಹೊಸ ಫಲಾನುಭವಿಗಳು ಅರ್ಹರಿದ್ದು, ಅವರಿಗೆ ಆಹಾರಧಾನ್ಯಗಳನ್ನು ವಿತರಿಸುವುದು ಸಹ ಅಷ್ಟೇ ಪ್ರಾಮುಖ್ಯತೆಯೂ ಇರುವುದರಿಂದ ತಾತ್ಕಾಲಿಕವಾಗಿ ಪ್ರತ್ಯೇಕ ಬಣ್ಣದ ಕೂಪನ್‌ಗಳನ್ನು ವರ್ಗವಾರು ವಿಂಗಡಿಸಿ 1ನೇ ಮಾರ್ಚ್, 2006 ರಿಂದ ಪ್ರಾರಂಭವಾಗಿ 6 ತಿಂಗಳ ಕಾಲಾವಧಿಯವರೆಗೆ ಉಪಯೋಗಿಸಲು ಅನುಕೂಲವಾಗುವಂತೆ ಸರ್ಕಾರದಿಂದ ಆದೇಶ ನೀಡುವಂತೆ ಕೋರಿರುತ್ತಾರೆ. ಸದರಿಯವರ ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕೂಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004, ಬೆಂಗಳೂರು, ದಿನಾಂಕ: 17ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

1. ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ಸರ್ಕಾರದ ಆದೇಶದಂತೆ ಮನೆ-ಮನೆ ಪುನರ್ ಸಮೀಕ್ಷೆಯಲ್ಲಿ ಕಂಡುಬಂದ ಎಲ್ಲಾ ಅರ್ಹ ಫಲಾನುಭವಿಗಳಿಗೆ ಆಹಾರಧಾನ್ಯಗಳನ್ನು ವಿತರಿಸಲು ವರ್ಗವಾರು ಪ್ರತ್ಯೇಕ ಬಣ್ಣದ ಕೂಪನ್‌ಗಳನ್ನು (Tamper Proof) 1ನೇ ಮಾರ್ಚ್, 2006 ರಿಂದ 6 ತಿಂಗಳ ಅವಧಿಯವರೆಗೆ ಅನ್ವಯವಾಗುವಂತೆ ವಿತರಿಸಲು ಆದೇಶಿಸಿದೆ.
2. ಪ್ರತಿ ಅರ್ಹ ಫಲಾನುಭವಿಗಳಿಂದ ರೂ. 5/- ನ್ನು ಪಡೆದು ಪಡಿತರ ಕೂಪನ್‌ಗಳನ್ನು ವಿತರಿಸುವುದು.
3. ಆಹಾರಧಾನ್ಯಗಳನ್ನು ಪಡೆಯಲು ಈಗ ವಿತರಿಸಲಾಗುತ್ತಿರುವ ಪಡಿತರ ಕೂಪನ್‌ಗಳು ಜಾರಿಗೆ ಬಂದ ನಂತರ ಈ ಮೊದಲಿದ್ದ ಎಲ್ಲಾ ರೀತಿಯ ಪಡಿತರ ಚೀಟಿಗಳು ಹಾಗೂ ತಾತ್ಕಾಲಿಕ ಪಡಿತರ ಕೂಪನ್‌ಗಳು ತಮ್ಮಷ್ಟಕ್ಕೆ ನಿಷ್ಕ್ರಿಯೆಗೊಳ್ಳುತ್ತವೆ. (ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶವನ್ನು ಹೊರತುಪಡಿಸಿ)
4. ಈ ವಿತರಣಾ ಕಾರ್ಯವನ್ನು ಮನೆ-ಮನೆ ಸಮೀಕ್ಷೆಯನ್ನು ಕೈಗೊಂಡ ತಂಡದವರೆ ನೆರವೇರಿಸತಕ್ಕದ್ದು.
5. ಇಲಾಖೆಯು ಕೈಗೊಂಡಿರುವ ಗಣಕೀಕರಣದ ಕಾರ್ಯದೊಂದಿಗೆ ಮೇಲೆ ತಿಳಿಸಿದ ಕೂಪನ್ ಹಂಚಿಕೆ ಕಾರ್ಯಕ್ರಮವನ್ನು ಹೊಂದಿಸಿಕೊಳ್ಳತಕ್ಕದ್ದು. ಸಂಪೂರ್ಣ ಗಣಕೀಕರಣ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳುವ ಸಂಸ್ಥೆಗೆ ಕೂಪನ್ ಮುದ್ರಣದ ಕಾರ್ಯವನ್ನೂ ಸಹ ವಹಿಸತಕ್ಕದ್ದು.
6. ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಪ್ರತ್ಯೇಕವಾಗಿ ಖಾತೆಯನ್ನು ತೆರೆದು ಕೂಪನ್‌ನಿಂದ ಸಂಗ್ರಹಿಸಿದ ಹಣವನ್ನು ಆ ಖಾತೆಗೆ ಜಮಾ ಮಾಡಲು ಸೂಚಿಸಿದೆ. ಹಾಗೆಯೇ, ಸಂಪೂರ್ಣ ಗಣಕೀಕರಣದ ಯೋಜನೆಯಡಿಯಲ್ಲಿ ಸಂದಾಯವಾಗುವ ಮೊತ್ತವನ್ನು ಸಹ ಇದೇ ಖಾತೆಗೆ ಜಮೆ ಮಾಡಿ ನಿರ್ವಹಿಸಲು ಆದೇಶಿಸಿದೆ.
7. ಈ ಪ್ರಕ್ರಿಯೆಯನ್ನು ಇದೇ ಜನವರಿ 26 ರಿಂದ ಪ್ರಾರಂಭಿಸಲು ಕ್ರಮ ಕೈಗೊಳ್ಳುವುದು.
8. ಈಗ ನಿಗದಿಪಡಿಸಿದ ಕಾಲಾವಧಿಯೊಳಗೆ ಉದ್ದೇಶಿತ ಗಣಕೀಕೃತ ಪಡಿತರ ಚೀಟಿಗಳನ್ನು ಎಲ್ಲಾ ಅರ್ಹ ಫಲಾನುಭವಿಗಳಿಗೆ ವಿತರಿಸಲು ಆಡಳಿತ ಯಂತ್ರವನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ಸಜ್ಜುಗೊಳಿಸುವುದು.

2. ಮೇಲ್ಕಂಡ ಆದೇಶದ ಹಿನ್ನೆಲೆಯಲ್ಲಿ ಯಾವುದೇ ಸ್ಪಷ್ಟೀಕರಣ/ವಿವರಗಳನ್ನು ಕೋರಿದಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಆಯುಕ್ತರು ಸಂಬಂಧಿಸಿದ ಎಲ್ಲರಿಗೂ ಸುತ್ತೋಲೆ ಮೂಲಕ ತಿಳಿಯ ಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 110

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕಿನ ಬೆಂಗಳೂರು-ಜಲಸೂರು ರಸ್ತೆಯಿಂದ ಸಾಲಿಗ್ರಾಮದ ಮುಖಾಂತರ ಬೆಂಗಳೂರು ಜಲಸೂರು (ಬೈಪಾಸ್ ರಸ್ತೆ) ಜಿಲ್ಲಾ ಮುಖ್ಯರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಆರ್‌ಡಿಎಸ್:ಸಇಂ: 2005-06, ದಿನಾಂಕ: 2.1.2006.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕಿನ ಬೆಂಗಳೂರು-ಜಲಸೂರು ರಸ್ತೆಯಿಂದ ಸಾಲಿಗ್ರಾಮದ ಮುಖಾಂತರ ಬೆಂಗಳೂರು ಜಲಸೂರು ರಸ್ತೆ (ಬೈಪಾಸ್ ರಸ್ತೆ) ಸರಪಳಿ 181.60 ರಿಂದ ಪ್ರಾರಂಭವಾಗಿ ಸರಪಳಿ 182.50 ರಲ್ಲಿ ಸಂಧಿಸುವುದು. ಸದರಿ 2.50 ಕಿ.ಮೀ. ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಜಿಲ್ಲಾ ಮುಖ್ಯ ರಸ್ತೆಯ ಸಂಪರ್ಕ ಕಲ್ಪಿಸುವ ಅತೀ ಮುಖ್ಯ ರಸ್ತೆಯಾಗಿದ್ದು, ಈ ರಸ್ತೆಯು ಬಹಳ ವರ್ಷಗಳಿಂದ ಅಭಿವೃದ್ಧಿಪಡಿಸದೆ ಸಂಚಾರಕ್ಕೆ ತುಂಬಾ ತೊಂದರೆಯಾಗಿರುತ್ತದೆ. ಈ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸಿ ಅಭಿವೃದ್ಧಿಪಡಿಸುವುದು ಅತ್ಯವಶ್ಯಕವಾಗಿರುವುದಾಗಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 5ನೇ ಜನವರಿ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕಿನ ಬೆಂಗಳೂರು-ಜಲಸೂರು ರಸ್ತೆಯಿಂದ ಸಾಲಿಗ್ರಾಮದ ಮುಖಾಂತರ ಬೆಂಗಳೂರು ಜಲಸೂರು ರಸ್ತೆ (ಬೈಪಾಸ್ ರಸ್ತೆ) ಸರಪಳಿ 181.60 ರಿಂದ ಪ್ರಾರಂಭವಾಗಿ ಸರಪಳಿ 182.50 ರಲ್ಲಿ ಸಂಧಿಸುವುದು. ಸದರಿ 2.50 ಕಿ.ಮೀ. ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿ ಎಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 111 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 2005, ದಿನಾಂಕ: 8.8.2005.
2) ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ನ್ಯಾಯಾಧೀಶರ ದಿನಾಂಕ: 17.10.2005ರ ವಿಚಾರಣಾ ವರದಿ.
3) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 2005, ದಿನಾಂಕ: 29.10.2005.
4) ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಅವರ ಉತ್ತರ ದಿನಾಂಕ: 11.11.2005.

**ಪ್ರಸ್ತಾವನೆ:**

ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ರಾಜಕೀಯ, ವಿಶ್ರಾಂತಿ ವೇತನ) ಇವರು ಕಂದಾಯ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯದೇ ಸಹಮತಿಯನ್ನು ಪಡೆಯಲಾಗಿದೆಯೆಂದು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಂಆರ್‌ಆರ್ 97, ದಿನಾಂಕ: 17.7.2000 ನ್ನು ಹೊರಡಿಸಿ ಭೂ ದಾಖಲೆಗಳ ನಿರ್ದೇಶಕರಿಗೆ ರೂ.114.59 ಲಕ್ಷ ಹಣವನ್ನು ಬಿಡುಗಡೆಗೊಳಿಸಿರುವ ದುರ್ನಡತೆಯ ಆರೋಪಗಳಿಗಾಗಿ ಶ್ರೀ ಸಿ. ಕೃಷ್ಣಮೂರ್ತಿರವರ ವಿರುದ್ಧ ವಿಚಾರಣೆ ನಡೆಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ: 8.8.2005ರ ಆದೇಶದಲ್ಲಿ ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ವಿಚಾರಣೆಯನ್ನು ಪೂರ್ತಿಗೊಳಿಸಿ ಮೇಲೆ 2 ರಲ್ಲಿ ಓದಲಾದ ವರದಿ ಸಲ್ಲಿಸಿದ ವಿಚಾರಣಾಧಿಕಾರಿಯವರು ಆಪಾದಿತ ಸಿ. ಕೃಷ್ಣಮೂರ್ತಿರವರು ಸಚಿವಾಲಯ ಕೈಪಿಡಿಯ ನಿಯಮಗಳನ್ನು ಪಾಲಿಸುವಲ್ಲಿ ವಿಫಲರಾಗಿರುತ್ತಾರೆಂದು ಇವರ ಮೇಲಿನ ಆರೋಪವು ರುಜುವಾತಾಗಿದೆಯೆಂದು ವರದಿ ನೀಡಿರುತ್ತಾರೆ.

ಈ ಸಂಬಂಧ ವಿಚಾರಣಾ ವರದಿಯನ್ನು ಆಪಾದಿತರಿಗೆ ಒದಗಿಸಿ ಮೇಲೆ ಓದಲಾದ ಉಲ್ಲೇಖ (3)ರ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿದೆ. ಇದಕ್ಕೆ ಆಪಾದಿತರು ಉತ್ತರ ನೀಡುತ್ತಾ ಅವರಿಂದ ಯಾವುದೇ ದುರ್ನಡತೆ ಆಗಿಲ್ಲವೆಂದು ಪ್ರಶ್ನಿತ ಆದೇಶದ ಕರಡು ಮೇಲಾಧಿಕಾರಿಗಳ ಅನುಮೋದಿಸಿ ಕಳುಹಿಸಿರುವುದನ್ನು ಮತ್ತು ಅವರ ಅವಗಾಹನೆಗೆ ತಂದು ಹೊರಡಿಸಿರುತ್ತೇನೆಂದು ತಿಳಿಸಿರುತ್ತಾರೆ.

ಆರೋಪಿತರ ಹೇಳಿಕೆಯನ್ನು ವಿಚಾರಣಾ ವರದಿ ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ, ಆರ್ಥಿಕ ಇಲಾಖೆಯು ಕಂದಾಯ ಇಲಾಖೆಗೆ ನೀಡಿದ ಸ್ಪಷ್ಟೀಕರಣದ ಬಗ್ಗೆ ಅನುಸರಣಾ ಕ್ರಮವನ್ನು ತೆಗೆದುಕೊಳ್ಳದೇ ಕಂದಾಯ ಇಲಾಖೆಯು ತನ್ನದೇ ಆದ ನಿಲುವನ್ನು ತಾಳಿ ಪ್ರಶ್ನಿತ ಆದೇಶ ಹೊರಡಿಸಿರುವುದು ಕಂಡು ಬರುತ್ತದೆ. ಆಪಾದಿತರು ವಿವರಣೆ ನೀಡಿರುವಂತೆ ಸದರಿ ಆದೇಶ ಕರಡನ್ನು ಮೇಲಾಧಿಕಾರಿಗಳು ಅನುಮೋದಿಸಿ ಆಪಾದಿತರಿಗೆ ಕಳುಹಿಸಿರುವುದು ವಾಸ್ತಾವವಾಗಿದ್ದರೂ ಸಹ ಆರ್ಥಿಕ ಇಲಾಖೆಯು ಸಹಮತಿ ನೀಡದೇ ಇದ್ದರು ಅದನ್ನು ಆದೇಶದಲ್ಲಿ ಸಹಮತಿ ನೀಡಿದೆಯೆಂದು ನಮೂದಿಸಿರುವುದನ್ನು ಆಪಾದಿತರು ಗಮನಿಸಿಯೂ ಸಹಾ ಆ ಬಗ್ಗೆ ಅವರ ಮೇಲಾಧಿಕಾರಿಗಳಿಗೆ ಸಲಹೆಯನ್ನು ನೀಡುವುದಾಗಲೀ ಅಥವಾ ತತ್ಸಂಬಂಧ ಟಿಪ್ಪಣಿಯನ್ನು ಮಂಡಿಸುವುದಾಗಲೀ ಮಾಡದೇ ಏಕಾಏಕಿ ಹೊರಡಿಸುವ ಮುನ್ನಾ ಅವಗಾಹನೆಗೆ ಮಂಡಿಸಿ ಮತ್ತೆ

ಅನುಮೋದನೆ ಪಡೆದಿರುವುದು ಇವರು ಎಸಗಿರುವ ಸ್ಪಷ್ಟವಾದ ದೋಷವಾಗಿರುತ್ತದೆ. ಆದಾಗ್ಯೂ ಈ ಪ್ರಕರಣದಲ್ಲಿ ಹಣ ದುರುಪಯೋಗವಾಗಿರುವುದೇ ಆಗಲೀ ಅಥವಾ ಸರ್ಕಾರಕ್ಕೆ ನಷ್ಟ ಉಂಟಾಗಿರುವ ಬಗ್ಗೆ ಆಗಲಿ ಗುರುತರವಾದ ಆಪಾದನೆ ಇಲ್ಲದಿರುವುದನ್ನು ಮತ್ತು ಆರೋಪಿತರು ಎಸಗಿರುವ ದುರ್ನಡತೆಯ ಸ್ವರೂಪವನ್ನು ಮನಗಂಡು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು, ಆರೋಪಿತ ಅಧಿಕಾರಿಗಳಾದ ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ ರವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(ii) ರಡಿಯಲ್ಲಿ ವಾಗ್ದಂಡನೆ (CENSURE)ಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 119

**ವಿಷಯ:** ಶ್ರೀ ಎಲ್.ಎನ್. ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣಾ - ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 117 ವಸೇಬಿ 97, ದಿನಾಂಕ: 13.11.2003.
2) ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಚಾರಣಾಧಿಕಾರಿಗಳ ದಿನಾಂಕ: 15.11.2004ರ ವಿಚಾರಣಾ ವರದಿ.
3) 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿಆಸುಇ 97 ಎಸ್‌ಇಎನ್ 98, ದಿನಾಂಕ: 21.9.2005.
4) ಶ್ರೀ ಎಲ್.ಎನ್. ಸಾಲುಂಕೆ, ಅಧೀನ ಕಾರ್ಯದರ್ಶಿರವರ ದಿನಾಂಕ: 6.10.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಲ್.ಎನ್. ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆರವರು ಬೆಳಗಾವಿ ತಾಲ್ಲೂಕು ಪಂಚಾಯತ್ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ದಿನಾಂಕ: 12.6.1993 ರಿಂದ 19.1.1994 ರವರೆಗೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಳಗಾವಿ ತಾಲ್ಲೂಕು ಪಂಚಾಯತಿ ಆಶ್ರಯ ವಸತಿ ಯೋಜನೆಯ ರೂ.7,03,000/- ಗಳ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡ ಆರೋಪದ ಬಗ್ಗೆ ಮೇಲೆ (1) ರಲ್ಲಿ ಓದಲಾದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹೊರಡಿಸಿರುವ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 15.11.2004 ವಿಚಾರಣಾ ವರದಿಯನ್ನು ಸಲ್ಲಿಸಿ 1 ರಿಂದ 4ನೇ ಆಪಾದಿತ ಅಧಿಕಾರಿಗಳ ಮತ್ತು 5ನೇ ಆಪಾದಿತ ನೌಕರರ ಮೇಲೆ ಮಾಡಿರುವ ಯಾವೊಂದು ಆರೋಪಗಳೂ ಸಹಾ ರುಜುವಾತಾಗಿರುವುದಿಲ್ಲ. ಇವರುಗಳು ನಿರ್ದೋಷಿಗಳೆಂದು ನಿರ್ಧರಿಸುತ್ತೇನೆಂದು ತಿಳಿಸಿದ್ದಾರೆ.

ಶ್ರೀ ಎಲ್.ಎನ್. ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ, ಇವರನ್ನು ಹೊರತುಪಡಿಸಿ ಉಳಿದ ಅಧಿಕಾರಿ/ನೌಕರರ ವಿಷಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರು ನಿರ್ಣಯ ತೆಗೆದುಕೊಂಡಿರುತ್ತಾರೆ. ಶ್ರೀ ಎಲ್.ಎನ್. ಸಾಲುಂಕೆರವರಿಗೆ ಸಂಬಂಧಿಸಿದಂತೆ, ವಿಚಾರಣಾ ವರದಿಯನ್ನು ಒಪ್ಪದಿರಲು ಹಾಗೂ ತತ್ಸಬಂಧ ಇವರಿಗೆ ವಾಗ್ದಂಡನೆ ವಿಧಿಸಲು ಸಹ ಶಿಫಾರಸ್ಸನ್ನು ಮಾಡಿ ಮುಂದಿನ ಕ್ರಮಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಿರುತ್ತಾರೆ.

ಅದರಂತೆ, ವಿಚಾರಣಾ ವರದಿಯನ್ನು ಆಪಾದಿತರಿಗೆ ಒದಗಿಸಿ ಉಲ್ಲೇಖ (3) ರಲ್ಲಿ ಓದಲಾದ 2ನೇ ನೋಟೀಸಿನಲ್ಲಿ ವಿವರಣೆಯನ್ನು ಕೇಳಲಾಗಿತ್ತು. ಇದಕ್ಕೆ ಉತ್ತರವನ್ನು ನೀಡುತ್ತಾ, ಅವರ ಮೇಲಿನ ಆರೋಪಗಳನ್ನು ಮತ್ತೆ ನಿರಾಕರಿಸಿ ಆಶ್ರಯ ಮನೆಗಳ ನಿರ್ಮಾಣದ ಚೆಕ್‌ಗಳನ್ನು ನೇರವಾಗಿ ಫಲಾನುಭವಿಗಳಿಗೆ ತಲುಪಿಸಲಾಗಿದೆಯೆಂದು, ಅವರು ಯಾವುದೇ ದುರ್ನಡತೆ ಎಸಗಿಲ್ಲವೆಂದೂ ತಿಳಿಸಿರುತ್ತಾರೆ.

ಆಪಾದಿತರ ಈ ಹೇಳಿಕೆಯನ್ನು ವಿಚಾರಣಾ ವರದಿಯನ್ನು ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ ಶ್ರೀ ಎಲ್.ಎನ್. ಸಾಲುಂಕೆ, ಆರೋಪಿತ ಅಧಿಕಾರಿ ಸದರಿ ಕಾಮಗಾರಿಗಳನ್ನು ಕಾಂಟ್ರಾಕ್ಟರ್ ಮೂಲಕ ನಿರ್ವಹಿಸಿದ್ದು, ಇದು ಆಡಿಟ್ ವರದಿಯಲ್ಲಿಯೂ ಸಹಾ ನಮೂದಿಸಲಾಗಿರುವುದು ಕಂಡು ಬರುತ್ತದೆ. ಆದರೆ, ಹಣ ದುರುಪಯೋಗವಾಗಿರುವ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳು ಇಲ್ಲದಿರುವುದನ್ನು ಮತ್ತು ಆರೋಪಿತರು ಎಸಗಿರುವ ದುರ್ನಡತೆಯು procedural lapse ಗಳಿಂದ ಕೂಡಿರುವುದು ದಾಖಲೆಗಳಿಂದ ಸ್ಪಷ್ಟಪಡುವುದರಿಂದ ವಿಚಾರಣಾ ವರದಿಯನ್ನು ಮತ್ತು ಈ ಆಪಾದಿತರ ಹೇಳಿಕೆಯನ್ನು ತಿರಸ್ಕರಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಎಲ್.ಎನ್. ಸಾಲುಂಕೆ, ಸರ್ಕಾರದ ಅಧೀನ ಕಾರ್ಯದರ್ಶಿ ರವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(ii) ರಡಿಯಲ್ಲಿ ವಾಗ್ದಂಡನೆ (CENSURE)ಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 120

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಡಿಪಿಎಆರ್ 295 ಎಸ್ಎಎಸ್ 2005, ದಿನಾಂಕ: 24.11.2005.

**ಪ್ರಸ್ತಾವನೆ:**

ಮೇಲೆ ದಿನಾಂಕ: 24.11.2005 ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯಾದ ಶ್ರೀ ಪಿ.ಬಿ. ಮಹಿಷಿ, ಐಎಎಸ್ ಇವರಿಗೆ ವೇತನ ನಿಗದಿತ ಶ್ರೇಣಿ ರೂ.26,000 ರಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಲೋಕೋಪಯೋಗಿ ಇಲಾಖೆಯಲ್ಲಿ ಉನ್ನತೀಕರಿಸಲಾಗುವ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ನೇಮಿಸಲಾಗಿರುತ್ತದೆ. ಆದ್ದರಿಂದ ಲೋಕೋಪಯೋಗಿ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2005, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಪಿ.ಬಿ. ಮಹಿಷಿ, ಐ.ಎ.ಎಸ್, ಇವರು ಕಾರ್ಯ ವರದಿಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವುದರೊಂದಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರನ್ವಯ ಹೆಚ್ಚುವರಿ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1197 ಸೇ-4/2003, ದಿನಾಂಕ: 29.11.2003 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 121

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಲಸಂಪನ್ಮೂಲ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2002, ದಿನಾಂಕ: 23.1.2002.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 36 ಸಸಿವಿ 2004, ದಿನಾಂಕ: 14.6.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 23.1.2002ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ದಿನಾಂಕ: 18.2.2002 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1 | ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು | 1 ಹುದ್ದೆ |
| 2 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ) | 1 ಹುದ್ದೆ |
| 3 | ಶೀಘ್ರಲಿಪಿಗಾರ (ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ) | 2 ಹುದ್ದೆಗಳು |
| 4 | ಭಾಷಾಂತರಕಾರರು (ಶಾಖಾಧಿಕಾರಿ)-ಹಿರಿಯ ಸಹಾಯಕ | 1 ಹುದ್ದೆ |
| 5 | ಕಿರಿಯ ಸಹಾಯಕ | 1 ಹುದ್ದೆ |
| 6 | ವಾಹನ ಚಾಲಕ | 1 ಹುದ್ದೆ |
| 7 | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **9 ಹುದ್ದೆಗಳು** |

ನಂತರ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 14.6.2005ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 1.1.2005 ರಿಂದ 31.12.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಪ್ರಸ್ತುತ ಈ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ: 31.12.2005ಕ್ಕೆ ಮುಕ್ತಾಯಗೊಂಡಿರುವ ಹಿನ್ನೆಲೆಯಲ್ಲಿ ಈ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 88 ಸಸಿವಿ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಪೂರಕ 8 ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2006 ರಿಂದ 31.12.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 122

**ವಿಷಯ:** ಮುಖ್ಯ ಮಂತ್ರಿಗಳ ಸಚಿವಲಯದಲ್ಲಿನ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯ ಮುಂದುವರಿಕೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2004, ದಿನಾಂಕ: 9.11.2004.

2) ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಇಎಂ2/128/ಎಂಐಎಸ್‌ಸಿ/2005, ದಿನಾಂಕ: 16.12.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂ: 9.11.2004ರ ಸರ್ಕಾರದ ಆದೇಶದಲ್ಲಿ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ದಿನಾಂಕ: 16.1.2004 ರಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಒಂದು ವೇತನ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ವಿಶೇಷಾಧಿಕಾರಿ ಹುದ್ದೆಯ ಸೃಜನೆ ಅವಧಿಯು ದಿನಾಂಕ: 15.1.2006ಕ್ಕೆ ಮುಕ್ತಾಯವಾಗಲಿರುವುದರಿಂದ ಹುದ್ದೆಯ ಅವಧಿಯನ್ನು ವಿಸ್ತರಿಸಲು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2005, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2006**

ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ದಿನಾಂಕ: 16.1.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 123

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

**ವಿಷಯ:** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಕಾರ್ಯದರ್ಶಿ-2 ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2005, ದಿನಾಂಕ: 16.2.2005.

2) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 460 ಸೇಅಸೆ 2005, ದಿನಾಂಕ: 22.12.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಸರ್ಕಾರಿ ಆದೇಶ ದಿನಾಂಕ: 16.2.2005 ರಲ್ಲಿ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ಕಾರ್ಯದರ್ಶಿ-2 ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಮೇಲೆ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಯ ಅವಧಿಯನ್ನು ಮುಂದುವರೆಸಲು ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 100 ಸಸಿವಿ 2005, ಬೆಂಗಳೂರು, ದಿನಾಂಕ: 5ನೇ ಜನವರಿ 2006**

ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ಕಾರ್ಯದರ್ಶಿ-2 ಹುದ್ದೆಯನ್ನು ದಿನಾಂಕ: 1.1.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 124

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು, ಕೊಡಗಹಳ್ಳಿ ಗ್ರಾಮದ ಶ್ರೀ ದುರ್ಗದ ಮಾರಮ್ಮ (ಶ್ರೀ ರಾಮಗಿರಿಯಮ್ಮ) ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.

2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/24/2005-06, ದಿನಾಂಕ: 26.09.2005.

3) ಮೈಸೂರು ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಡಿವಿಎಸ್/2/ಸಿಆರ್/62/2005-06, ದಿನಾಂಕ: 14.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು, ಕೊಡಗಹಳ್ಳಿ ಗ್ರಾಮದ ಶ್ರೀ ದುರ್ಗದ ಮಾರಮ್ಮ (ಶ್ರೀ ರಾಮಗಿರಿಯಮ್ಮ) ದೇವಸ್ಥಾನದ ಆಡಳಿತವನ್ನು ದೇವರ ಹಟ್ಟಿ ಮನೆತನ ಹಾಗೂ ಗ್ರಾಮಸ್ಥರು ನಿರ್ವಹಿಸುತ್ತಿರುವುದರಿಂದ ಸದರಿ ದೇವಸ್ಥಾನವನ್ನು ಅಧಿಸೂಚಿತ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ ಸೂಕ್ತ ಆದೇಶ ಹೊರಡಿಸಲು ಧಾರ್ಮಿಕ ದತ್ತಿ ಆಯುಕ್ತರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕೊಡಗಹಳ್ಳಿ ಶ್ರೀ ದುರ್ಗದ ಮಾರಮ್ಮ (ಶ್ರೀ ರಾಮಗರಿಯಮ್ಮ) ದೇವಸ್ಥಾನವನ್ನು 1956-57 ರಿಂದಲೂ ಸದರಿ ಗ್ರಾಮದ ದೇವರ ಹಟ್ಟಿ ಮನೆತನದವರೇ ಪೂಜಾ ಕಾರ್ಯಗಳನ್ನು ಹಾಗೂ ಇತರೇ ಸಮಸ್ತ ವ್ಯವಹಾರಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದು, ಈ ದೇವಾಲಯವನ್ನು ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 1(4)(ii)ರ ಅನ್ವಯ ಮುಜರಾಯಿ ಇಲಾಖೆಯಿಂದ ಈ ದೇವಾಲಯವನ್ನು ಕೈಬಿಟ್ಟು ದೇವರಹಟ್ಟಿ ಮನೆತನದವರು ಹಾಗೂ ಗ್ರಾಮಸ್ಥರು ನಿರ್ವಹಿಸಿಕೊಂಡು ಹೋಗಲು ಆದೇಶಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 100 ಮುಆಬಿ 2005, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1ರ ಉಪನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003 ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಮೈಸೂರು ಜಿಲ್ಲೆ, ಟಿ.ನರಸೀಪುರ ತಾಲ್ಲೂಕು, ಕೊಡಗಹಳ್ಳಿ ಗ್ರಾಮದ ಶ್ರೀ ದುರ್ಗದ ಮಾರಮ್ಮ ಕ್ರಮ ಸಂಖ್ಯೆ: 116, ಪುಟ ಸಂಖ್ಯೆ: 614ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 125 ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

## ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ

**ವಿಷಯ:** ಶ್ರೀ ಹರೀಶ್, ದಿನಗೂಲಿ ಪದವೀದರ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 13 ಎಸ್‌ಎಲ್‌ಸಿ 94, ದಿನಾಂಕ: 29.9.94.
2) ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಡಿಸಿ 90, ದಿನಾಂಕ: 2.12.94.
3) ಆಯುಕ್ತರು, ಯುವಜನಸೇವಾ ಹಾಗೂ ಕ್ರೀಡಾ ಇಲಾಖೆ ಇವರ ಪತ್ರ ಸಂಖ್ಯೆ: ಸಿವೈಎಸ್‌ಎಸ್/ಸಿ.5/ಆರ್‌ಎಸ್.8/ 2002-03, ದಿನಾಂಕ: 16.4.2005.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737/90, 738/90, 1038/90 ಮತ್ತು 297/91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿ ನೌಕರರಾಗಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೊಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶಿಸಿದೆ.

ಲೋಕೋಪಯೋಗಿ ಇಲಾಖೆಯು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ದಿನಾಂಕ: 29.9.94ರ ಆದೇಶಾನುಸಾರ ದಿನಾಂಕ: 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲಮಾ ಇಂಜಿನಿಯರ್‌ರನ್ನು ದಿನಾಂಕ: 29.9.94 ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಮತ್ತು ಸದರಿ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಆದೇಶಿಸಲಾಗಿದೆ.

ಆಯುಕ್ತರು, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ ಇವರು ಮೇಲೆ (3) ರಲ್ಲಿ ಓದಲಾದ ತಮ್ಮ ಪ್ರಸ್ತಾವನೆಯಲ್ಲಿ ಶ್ರೀ ಎಸ್. ಹರೀಶ್, ದಿನಗೂಲಿ ಇಂಜಿನಿಯರ್, ಇವರನ್ನು 1986-87ನೇ ಸಾಲಿನ ಎಸ್‌ಆರ್ ದರದ ಪೂರ್ಣಕಾಲಿಕ ದಿನಗೂಲಿ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದುದರಿಂದಲೂ, ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಐಟಿವೈ 69 ಇವೈಡಬ್ಲ್ಯೂ 84, ದಿನಾಂಕ: 29.3.1985 ರಲ್ಲಿ 1 ಸಹಾಯಕ ಇಂಜಿನಿಯರ್ ಹುದ್ದೆಯನ್ನು ವಿದ್ಯಾನಗರ ಇಂಜಿನಿಯರ್ ವಿಭಾಗಕ್ಕೆ ಸೃಜಿಸಿ, ಮಂಜೂರಾಗಿರುವ ಹುದ್ದೆಗೆ ಎದುರಾಗಿ ನಿಯೋಜನೆ ಮೇಲೆ ಶ್ರೀ ನಾಗೇಶ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಇವರಿಂದ ಭರ್ತಿ ಮಾಡಿಕೊಳ್ಳಲಾಗಿದೆಯೆಂದೂ, ಈ ಹುದ್ದೆ ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 304 ಯುಇಸೇ 99, ದಿನಾಂಕ: 26.1.2000 ರಲ್ಲಿ ಕೇಂದ್ರ ಕಛೇರಿಗೆ ವರ್ಗಾಯಿಸಿರುವುದರಿಂದ, ಶ್ರೀ ಹರೀಶ್, ದಿನಗೂಲಿ ಪದವೀದರ ಇಂಜಿನಿಯರ್ ದಿನಾಂಕ: 26.6.87 ರಿಂದ ಪೂರ್ಣ ಕಾಲಿಕವಾಗಿ ಇಲ್ಲಿಯವರೆವಿಗೂ ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಇವರ ಸೇವೆಯನ್ನು ಇಂಜಿನಿಯರಿಂಗ್ ವಿಭಾಗದಲ್ಲಿ ಸೃಜಿಸಲಾದ ಸಹಾಯಕ ಅಭಿಯಂತರರ ಹುದ್ದೆಯಲ್ಲಿ ಸಕ್ರಮಗೊಳಿಸಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ 2005-06ನೇ ಸಾಲಿನಲ್ಲಿ 12ನೇ ಹಣಕಾಸು ಆಯೋಗವು ಯುವಜನಸೇವಾ ಮತ್ತು ಕ್ರೀಡಾ ಇಲಾಖೆಯು ಕ್ರೀಡಾಂಗಣಗಳ ಮೂಲಭೂತ ಸೌಕರ್ಯ ಮತ್ತು ಕ್ರೀಡಾಂಗಣ ನಿರ್ಮಾಣ ಕಾಮಗಾರಿಗೆ ರೂ.100.00 ಕೋಟಿಗಳನ್ನು ಒದಗಿಸಿದ್ದು ಈ ಅನುದಾನವನ್ನು ನಿಗದಿತ ಅವಧಿಯೊಳಗೆ ಹಂತಹಂತವಾಗಿ (ಪ್ರತಿವರ್ಷ ರೂ.25.00 ಕೋಟಿಗಳಲ್ಲಿ) ಖರ್ಚು ಮಾಡಬೇಕಾಗಿದ್ದು ಕಾಮಗಾರಿ ಉಸ್ತುವಾರಿಗೆ ಸಹಾಯಕ ಇಂಜಿನಿಯರ್ ರವರ ಸೇವೆ ಯುವಜನಸೇವಾ ಮತ್ತು ಕ್ರೀಡಾ ಇಲಾಖೆಗೆ ಅತ್ಯಂತ ಅವಶ್ಯವಿರುವುದರಿಂದ ಶ್ರೀ ಎಸ್. ಹರೀಶ್, ದಿನಗೂಲಿ ಪದವೀದರ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ 1987 ರಿಂದ ಸರ್ಕಾರಿ ಆದೇಶ ಸಂಖ್ಯೆ: ಐಟಿವೈ 69 ಇವೈಡಬ್ಲ್ಯೂ 84, ದಿನಾಂಕ: 29.3.1985 ರಲ್ಲಿ ಸೃಜನೆಗೊಂಡು ಮಂಜೂರಾದ 1 ಸಹಾಯಕ ಇಂಜಿನಿಯರ್ ಹುದ್ದೆಯ ಎದುರಿಗೆ ದಿನಗೂಲಿ ಆಧಾರದ ಮೇಲೆ ಪೂರ್ಣಕಾಲಿಕವಾಗಿ ಕರ್ತವ್ಯ ನಿರ್ವಹಿಸುತ್ತಿರುವ ಹಿನ್ನಲೆಯಿಂದ, ಹಾಲಿ ಜಾರಿಯಲ್ಲಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಎಸ್‌ಎಲ್‌ಸಿ 94, ದಿನಾಂಕ: 29.9.94 ರನ್ವಯ ಶ್ರೀಯುತರ ಸೇವೆಯನ್ನು ಮಂಜೂರಾದ 1 ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 28 ಯುಇಸೇ 2005, ಬೆಂಗಳೂರು, ದಿನಾಂಕ: 7ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ:-

1) ಶ್ರೀ ಹರೀಶ್, ಸಹಾಯಕ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ಪದವೀಧರ ಇಂಜಿನಿಯರ್‌ರಾಗಿ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ದಿನಾಂಕ: 1.7.87 ರಿಂದ 30.6.97 ರವರೆಗೆ ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದರೆಂದು ಭಾವಿಸಿ ಸಕ್ರಮಗೊಳಿಸಲಾಗಿದೆ.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಎಸ್‌ಎಲ್‌ಸಿ 94, ದಿನಾಂಕ: 29.9.94 ರಲ್ಲಿ ಹಾಗೂ ಸಿಆಸುಇ 17 ಸೇಸ್ಥಅ 94, ದಿನಾಂಕ: 20.4.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಶ್ರೀ ಎಸ್. ಹರೀಶ್, ದಿನಗೂಲಿ ಪದವೀದರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಜಾರಿಗೆ ಬರುವಂತೆ ರೂ. 6000-11200ರ ವೇತನಶ್ರೇಣಿಯ ಸಹಾಯಕ ಇಂಜಿನಿಯರ್‌ರಾಗಿ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | ಬಿ.ಇ. ಪಾಸು ಮಾಡಿದ ದಿ: | ದಿನಗೂಲಿ ಸೇವೆಗೆ ನೇಮಕಗೊಂಡ ದಿನಾಂಕ | ದಿನಗೂಲಿ ಸೇವೆಯಲ್ಲಿ 10 ವರ್ಷ ಪೂರೈಸಿ ಸಕ್ರಮಗೊಂಡ ದಿನಾಂಕ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| ಶ್ರೀ ಎಸ್. ಹರೀಶ್, ಪದವೀಧರ ಇಂಜಿನಿಯರ್ | 3.8.1965 | ಬಿ.ಇ. (ಸಿವಿಲ್) 1986 | 1.7.1987 | 1.7.1997 | ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ. |

1. ಶ್ರೀ ಎಸ್. ಹರೀಶ್, ಸಹಾಯಕ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ನಾಗೇಶ್, ಸಹಾಯಕ ಇಂಜಿನಿಯರ್ ರವರ ಸೇವೆಯನ್ನು ಹಿಂತಿರುಗಿಸಿದ್ದರಿಂದ ಖಾಲಿಯಾದ ಸಹಾಯಕ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಈ ಹುದ್ದೆಗೆ ಸ್ಥಳ ನಿಯುಕ್ತಿ ಮಾಡಿ ನೇಮಿಸಲಾಗಿದೆ.

2. ಈ ಅಧಿಕಾರಿಯು ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಮಾತ್ರ ಜಾರಿಗೆ ಬರುವಂತೆ ವೇತನ ನಿಗದಿ ಹಾಗೂ ಸೇವಾ ಹಿರಿತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

3. ಶ್ರೀ ನಾಗೇಶ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಪ್ರಸ್ತುತ ನಿಯೋಜನೆ ಮೇಲೆ ಸಹಾಯಕ ಇಂಜಿನಿಯರ್, ಯುವಜನಸೇವಾ ಮತ್ತು ಕ್ರೀಡಾ ಇಲಾಖೆ, ಇವರ ಸೇವೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂತಿರುಗಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಎಸ್‌ಎಲ್‌ಸಿ 94, ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಪಿ.ಆರ್. 130

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅಮೃತರಾವ್, ದ್ವಿ.ದ.ಸ. ಜಿಲ್ಲಾ ಪೊಲೀಸ್ ಕಛೇರಿ, ಬೀದರ್ ಇವರ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರ ಪತ್ರ ಸಂಖ್ಯೆ: 55:ಸಿಬ್ಬಂದಿ(5) 01-02, ದಿನಾಂಕ: 29.11.2002, 25.02.2004, 09.08.2004, 12.01.2005 ಮತ್ತು 25.10.2005.

**ಪ್ರಸ್ತಾವನೆ:**

ಶ್ರೀ ಅಮೃತರಾವ್, ದ್ವಿ.ದ.ಸ. ಇವರು ಅನುಕಂಪದ ಆಧಾರದ ಮೇಲೆ ದಿನಾಂಕ: 19.03.1998 ರಂದು ನೇಮಕಾತಿ ಹೊಂದಿ ಜಿಲ್ಲಾ ಪೊಲೀಸ್ ಕಛೇರಿ, ಬೀದರ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸದರಿಯವರು ಪ್ರೊಬೇಷನರಿ ಅವಧಿಯಲ್ಲಿ ಇಲಾಖಾ ಪರೀಕ್ಷೆಗಳಾದ ಪೊಲೀಸ್ ಮ್ಯಾನ್ಯುಯಲ್ ಮತ್ತು ಅಕೌಂಟ್ಸ್ ಲೋಯರ್ ಪರೀಕ್ಷೆಗಳನ್ನು ಕಡ್ಡಾಯವಾಗಿ ಉತ್ತೀರ್ಣರಾಗಬೇಕಾಗಿತ್ತು. ಆದರೆ ಇವರು ಅಕೌಂಟ್ಸ್ ಲೋಯರ್ ಪರೀಕ್ಷೆಯಲ್ಲಿ ಮಾತ್ರ ಉತ್ತೀರ್ಣರಾಗಿರುವುದರಿಂದ ಸದರಿಯವರು ಪೊಲೀಸ್ ಮ್ಯಾನ್ಯುಯಲ್ ಪಾಸು ಮಾಡಲು ಕೆ.ಸಿ.ಎಸ್.ಆರ್. ನಿಯಮಾವಳಿ, 1997 ನಿಯಮ (4) (2)ರ ಮೇರೆಗೆ ದಿನಾಂಕ: 20.03.2000 ರಿಂದ 20.03.2001ರ ವರೆಗೆ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸಲಾಗಿತ್ತು. ತದ ನಂತರವೂ ಸಹ ಇವರಿಗೆ ಕಡ್ಡಾಯವಾಗಿರುವ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದಿರುವುದರಿಂದ ಸದರಿಯವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 29.03.2001 ರಿಂದ ಒಂದು ವರ್ಷದ ವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ ಪತ್ರ ದಿನಾಂಕ: 29.11.2003 ರಲ್ಲಿ ಕೋರಿರುತ್ತಾರೆ.

ಶ್ರೀ ಅಮೃತರಾವ್, ದ್ವಿ.ದ.ಸ. ರವರು 2003ರ 2ನೇ ಅಧಿವೇಶನದಲ್ಲಿ ದಿನಾಂಕ: 05.01.2004 ರಂದು ಪೊಲೀಸ್ ಮ್ಯಾನ್ಯುಯಲ್ ಪರೀಕ್ಷೆಗೆ ಹಾಜರಾಗಿ ಉತ್ತೀರ್ಣರಾಗಿರುತ್ತಾರೆ. ಸದರಿ ನೌಕರರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ನ್ಯಾಯಾಂಗ ನಡವಳಿ/ಚಾಲ್ತಿ ಶಿಕ್ಷೆಗಳಾವುದೂ ಇರುವುದಿಲ್ಲ. ಮತ್ತು ಅವರ ಸೇವೆಯು ತೃಪ್ತಿಕರವಾಗಿರುವುದರಿಂದ ಸದರಿಯವರ ಖಾಯಂ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(1) ಪ್ರಕಾರ ದಿನಾಂಕ: 20.03.2001 ರಿಂದ 5.1.2004 (ಅಂತಿಮವಾಗಿ ಇಲಾಖಾ ಪರೀಕ್ಷೆಗೆ ಹಾಜರಾದ ದಿನಾಂಕ)ರ ವರೆಗೆ ವಿಸ್ತರಿಸುವಂತೆ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 57 ಪೊಸಿಲಿ 2002, ಬೆಂಗಳೂರು, ದಿನಾಂಕ: 2ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಶ್ರೀ ಅಮೃತರಾವ್, ದ್ವಿ.ದ.ಸ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 29.03.2001 ರಿಂದ 05.01.2004 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(1) ರನ್ವಯ ಸರ್ಕಾರವು ವಿಸ್ತರಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 59409 ಅಂ.ಆ.ಸ. 2005, ದಿನಾಂಕ: 28.11.2005 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 131 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ ಸಂಖ್ಯೆ: ವಾಕೈ 110 ಕೈಸೇಎ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006

ಸರ್ಕಾರಿ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2005, ದಿನಾಂಕ: 01.12.2005ರ ಆದೇಶ ಭಾಗದ 7ನೇ ಸಾಲಿನಲ್ಲಿ ನಮೂದಿಸಿರುವ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಲು ಹೆಸರನ್ನು ಶ್ರೀ ಎ.ಪಿ. ಜಹಗೀರ್‌ದಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಸಂಖ್ಯೆ: 35, ಬಾಲಾಜಿ ರಸ್ತೆ, 1ನೇ ಮಹಡಿ, 2ನೇ ಕ್ರಾಸ್, 2ನೇ ಹಂತ, ಗೃಹ ಲಕ್ಷ್ಮೀ ಲೇಔಟ್, ಬೆಂಗಳೂರು, ಎಂಬುದರ ಬದಲಾಗಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ನ್ಯಾಯಾಧೀಶರು, ಸಂಖ್ಯೆ: 239/1, ನಾಗಶ್ರೀ, ನಾಲ್ಕನೇ ಮುಖ್ಯ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು-560018, ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 132 **ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಸಂಖ್ಯೆ: ಆಕುಕ 125 ಎಂಎಂಸಿ 2005, ಬೆಂಗಳೂರು, ದಿನಾಂಕ: 21ನೇ ಜನವರಿ 2006

ದಿನಾಂಕ: 19.12.2005 ಸಂಖ್ಯೆ: ಆಕುಕ 125 ಎಂಎಂಸಿ 2005ರ ಅಧಿಸೂಚನೆಯಲ್ಲಿ "ಎಸ್.ಎನ್. ಕೃಷ್ಣಕುಮಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ" ಎಂಬುದಕ್ಕೆ ಬದಲಾಗಿ "ಎಸ್.ಎನ್. ಕೃಷ್ಣಕುಮಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 137 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಶಿಕ್ಷಣ ಸಚಿವಾಲಯ

**ವಿಷಯ:** ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ ಶೇಕಡ 20 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 341 ಡಿಪಿಐ 2004, ದಿನಾಂಕ: 03.05.2005.

2) ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ/ಎ1/25/2002-03, ದಿನಾಂಕ: 28.7.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದ ಪ್ರಕಾರ ಸಾರ್ವಜನಿಕ ಶಿಕ್ಷಣ ಇಲಾಖೆ ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ಗ್ರಂಥಾಲಯ ಇಲಾಖೆಗಳಿಗೆ ಸಂಬಂಧಿಸಿದಂತೆ ಶೇಕಡ 20 ರಷ್ಟು ಹುದ್ದೆಗಳನ್ನು ರದ್ದುಗೊಳಿಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ ಒಟ್ಟು 9 ಹುದ್ದೆಗಳನ್ನು ಅಂದರೆ ಶೀಘ್ರಲಿಪಿಗಾರರು-1, ಬೆರಳಚ್ಚುಗಾರರು-5, ಮತ್ತು ಜವಾನರ-3 ಹುದ್ದೆಗಳನ್ನು ರದ್ದುಗೊಳಿಸಿ ಆದೇಶಿಸಲಾಗಿದೆ. ಸದರಿ 9 ಹುದ್ದೆಗಳ ವಿವರಗಳನ್ನು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ನೀಡಿದ್ದು, ಅದರಂತೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಇಡಿ 700 ಡಿಪಿಐ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006

ಮೇಲೆ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ಇದಕ್ಕೆ ಸಂಬಂಧಪಟ್ಟಂತೆ ದಿನಾಂಕ: 03.05.2005ರ ಸರ್ಕಾರದ ಆದೇಶ ಸಂಖ್ಯೆ: ಇಡಿ 341 ಡಿಪಿಐ 2004 ರಲ್ಲಿ ರದ್ದುಪಡಿಸಿರುವ 9 ಹುದ್ದೆಗಳನ್ನು ಈ ಕೆಳಕಂಡಂತೆ ರದ್ದುಪಡಿಸಿದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

| | | | |
|---|---|---|---|
| 1 | ಶೀಘ್ರಲಿಪಿಗಾರರು | ನಿರ್ದೇಶಕರ ಕಛೇರಿ | 1 |
| 2 | ಬೆರಳಚ್ಚುಗಾರರು | ಜಿಲ್ಲಾ ಕೇಂದ್ರ ಗ್ರಂಥಾಲಯ, ಬಳ್ಳಾರಿ | 1 |
| | | ಜಿಲ್ಲಾ ಕೇಂದ್ರ ಗ್ರಂಥಾಲಯ, ಹಾವೇರಿ | 2 |
| | | ಜಿಲ್ಲಾ ಕೇಂದ್ರ ಗ್ರಂಥಾಲಯ, ಕೆ.ಜಿ.ಎಫ್. | 1 |
| | | ನಿರ್ದೇಶಕರ ಕಛೇರಿ | 1 |
| 3 | ಜವಾನರು (ಗ್ರೂಪ್-ಡಿ ಹುದ್ದೆಗಳು) | ಜಿಲ್ಲಾ ಕೇಂದ್ರ ಗ್ರಂಥಾಲಯ, ಬಳ್ಳಾರಿ | 1 |
| | | ನಗರ ಕೇಂದ್ರ ಗ್ರಂಥಾಲಯ, ಮೈಸೂರು | 1 |
| | | ನಿರ್ದೇಶಕರ ಕಛೇರಿ | 1 |
| | | ಒಟ್ಟು | **9** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರಿ**

ಪಿ.ಆರ್. 140 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಇಡಿ 86 ಡಿಸಿಇ 2005, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಸಂಖ್ಯೆ: ಇಡಿ 89 ಡಿಸಿಇ 97, ದಿನಾಂಕ: 26.05.2003ರ ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ: 7 ರಲ್ಲಿ ಶ್ರೀ ಮಲ್ಲೇಶ್ ಬಿ.ಸಿ. ಅವರ ಜನ್ಮ ದಿನಾಂಕವು 10.03.1963 ಎಂದಿರುವುದರ ಬದಲಾಗಿ 20.03.1963 ಎಂದು ಓದಿಕೊಳ್ಳತಕ್ಕದ್ದು.-

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 141

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಮಂಗಳೂರಿನ ಪಿಲಿಕುಳ ನಿಸರ್ಗಧಾಮದಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ವಿಯಇ 72 ವಿತ್ರಮ 2004 ದಿನಾಂಕ: 5.1.2006.

2) ಸರ್ಕಾರಿ ಆದೇಶ ಸಂಖ್ಯೆ: ಡಿಎಸ್‌ಟಿ 38 ಎಸ್‌ಸಿಟಿ 90, ದಿನಾಂಕ: 16.3.1991 ಮತ್ತು ದಿನಾಂಕ: 28.07.1992.

**ಪ್ರಸ್ತಾವನೆ:**

ಜನರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬಲಪಡಿಸುವ ಉದ್ದೇಶದಿಂದ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪಿಲಿಕುಳ ನಿಸರ್ಗಧಾಮ, ಮೂಡುಶೆಡ್ಡೆ, ವಾಮಂಜೂರು, ಮಂಗಳೂರು ಇಲ್ಲಿನ 20 ಎಕರೆ ಜಮೀನಿನಲ್ಲಿ ಒಟ್ಟು 6.50 ಕೋಟಿ ರೂ. ವೆಚ್ಚದಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸುವ ಕುರಿತು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸಲ್ಲಿಸಿದ ಅಂದಾಜು ಪ್ರಸ್ತಾವನೆಗೆ ಕೆಲವು ಷರತ್ತುಗಳನ್ನು ವಿಧಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಉತ್ತೇಜಿಸಲು ಮತ್ತು ಆಯಾ ಜಿಲ್ಲೆಗಳಲ್ಲಿ ಯೋಜನೆಗಳನ್ನು ರೂಪಿಸಲು ರಾಜ್ಯದ ಇತರೆ ಕೆಲವು ಜಿಲ್ಲೆಗಳನ್ನು ಒಳಗೊಂಡಂತೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಡಿಸ್ಟ್ರಿಕ್ ಕೌನ್ಸಿಲ್ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ಎಂಬ ಸಂಸ್ಥೆಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ರಚಿಸಿ ಸ್ಥಾಪಿಸಲಾಗಿದೆ.

ಮಂಗಳೂರಿನ ಪಿಲಿಕುಳ ನಿಸರ್ಗಧಾಮದಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸುವ ಕುರಿತಾದ ಯೋಜನೆಯನ್ನು ಅನುಷ್ಠಾನಗೊಳಿಸಲು ಮತ್ತು ಸದರಿ ಕೇಂದ್ರವನ್ನು ನಡೆಸಿಕೊಂಡು ಹೋಗಲು ಸಂಸ್ಥೆಯೊಂದರ ಅವಶ್ಯಕತೆಯನ್ನು ಪರಿಗಣಿಸಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಅಧ್ಯಕ್ಷತೆಯಲ್ಲಿ "ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ಮಂಗಳೂರು" ಎಂಬ ಸೊಸೈಟಿಯನ್ನು ರಚಿಸಿ ಅದನ್ನು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಅಡಿ ನೋಂದಾಯಿಸಲಾಗಿದೆ.

ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಪ್ರಕಾರ ಈ ಯೋಜನೆಗೆ ತಗಲುವ ಒಟ್ಟು 6.50 ಕೋಟಿ ರೂ.ಗಳನ್ನು ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳು ಸಮನಾಗಿ ಭರಿಸುತ್ತವೆ ಮತ್ತು ಈ ಮೊತ್ತದ ಪೈಕಿ ರಾಜ್ಯ ಸರ್ಕಾರದ ಪಾಲಿನ ಮೊತ್ತ 3.25 ಕೋಟಿ ರೂ.ಗಳನ್ನು ಈ ಯೋಜನೆಯ ಅನುಷ್ಠಾನಕ್ಕಾಗಿ ಬಿಡುಗಡೆ ಮಾಡಿ ನಂತರ ಕೇಂದ್ರ ಸರ್ಕಾರದ ಅನುದಾನವನ್ನು ಕೋರಬೇಕಾಗುತ್ತದೆ. ಆದುದರಿಂದ ರಾಜ್ಯ ಸರ್ಕಾರದ ಪಾಲಿನ ಮೊತ್ತ 3.25 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 72 ವಿತ್ರಮ 2004, ಬೆಂಗಳೂರು, ದಿನಾಂಕ: 17ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, ಪಿಲಿಕುಳ ನಿಸರ್ಗಧಾಮ, ಮೂಡುಶೆಡ್ಡೆ, ವಾಮಂಜೂರು, ಮಂಗಳೂರು, ಇಲ್ಲಿ ಒಟ್ಟು 6.50 ಕೋಟಿ ರೂ. ವೆಚ್ಚದಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು, ರಾಜ್ಯ ಸರ್ಕಾರದ ಪಾಲಿನ 3.25 ಕೋಟಿ ರೂ.ಗಳನ್ನು (ಮೂರು ಕೋಟಿ ಇಪ್ಪತ್ತೈದು ಲಕ್ಷಗಳು ಮಾತ್ರ) ಡಿಸ್ಟ್ರಿಕ್ ಕೌನ್ಸಿಲ್ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ಮಂಗಳೂರು ಇದರ ಅಧ್ಯಕ್ಷರಾಗಿರುವ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. ಈ ಯೋಜನೆಗೆ ತಗಲುವ ಒಟ್ಟು 6.50 ಕೋಟಿ ರೂ.ಗಳ ಪೈಕಿ ಕೇಂದ್ರ ಸರ್ಕಾರದ ಪಾಲಿನ 3.25 ಕೋಟಿ ರೂ.ಗಳನ್ನು ಕೇಂದ್ರ ಸರ್ಕಾರವು ಬಿಡುಗಡೆ ಮಾಡಿದ ನಂತರ ಈ ಯೋಜನೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.
2. ಒಂದು ವೇಳೆ ಕೇಂದ್ರ ಸರ್ಕಾರವು ಈ ಯೋಜನೆಗೆ ಒಪ್ಪದೇ ಇರುವ ಸಂದರ್ಭದಲ್ಲಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಪಾಲಿನ 3.25 ಕೋಟಿ ರೂ.ಗಳ ಗಾತ್ರಕ್ಕೆ ಇಳಿಸಿ ಅನುಷ್ಠಾನಗೊಳಿಸುವುದು. ಮತ್ತು ಯೋಜನೆಯ ಹೆಚ್ಚುವರಿ ವಿಸ್ತರಣೆಗಳನ್ನು ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯು ಸಾರ್ವಜನಿಕರಿಂದ ದೇಣಿಗೆಗಳನ್ನು ಸಂಗ್ರಹಿಸಿದಾಗ ಮತ್ತು ಸಂಗ್ರಹಿಸಿದ ಮೇಲೆ ಮಾಡತಕ್ಕದ್ದು.
3. ಮೇಲ್ಕಾಣಿಸಿ ಷರತ್ತು (1) ಅಥವಾ (2) ರಲ್ಲಿ ವಿವರಿಸಿದಂತೆ ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಈಗ ಬಿಡುಗಡೆ ಮಾಡಿದ ರಾಜ್ಯ ಸರ್ಕಾರದ ಪಾಲಿನ ಮೊತ್ತ 3.25 ಕೋಟಿ ರೂ.ಗಳನ್ನು ಡಿಸ್ಟ್ರಿಕ್ ಕೌನ್ಸಿಲ್ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು, ಜಿಲ್ಲಾಧಿಕಾರಿಗಳು ಮಂಗಳೂರು ಇವರ ಅಧ್ಯಕ್ಷತೆಯಲ್ಲಿರುವ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ಮಂಗಳೂರು ಇವರಿಗೆ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಮರು ಬಿಡುಗಡೆ ಮಾಡತಕ್ಕದ್ದು.
4. ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ಮಂಗಳೂರು ಈ ಸಂಸ್ಥೆಯು ಈ ಯೋಜನೆಯನ್ನು ಕೇಂದ್ರ ಸರ್ಕಾರದ ಹಾಗೂ ನ್ಯಾಷಿನಲ್ ಕೌನ್ಸಿಲ್ ಫಾರ್ ಸೈನ್ಸ್ ಮ್ಯೂಸಿಯಮ್ಸ್, ಕೋಲ್ಕತ್ತ ಇವರ ಮಾರ್ಗಸೂಚಿಗಳ ಪ್ರಕಾರ ನಿಗದಿತ ಅವಧಿಯೊಳಗಾಗಿ ಅನುಷ್ಠಾನಗೊಳಿಸುವುದು. ಅದರಂತೆ ಈ ಯೋಜನೆಯ ಒಟ್ಟಾರೆ ಅನುಷ್ಠಾನದ ಮೇಲು ಉಸ್ತುವಾರಿ ಜವಾಬ್ದಾರಿಯು ಡಿಸ್ಟ್ರಿಕ್ ಕೌನ್ಸಿಲ್ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಈ ಸಂಸ್ಥೆಯದ್ದಾಗಿರುತ್ತದೆ.
5. ಈ ಯೋಜನೆಯ ಅನುಷ್ಠಾನದಲ್ಲಿ ಕೈಗೊಳ್ಳುವ ಎಲ್ಲಾ ಕಾಮಗಾರಿಗಳ ಅಂದಾಜಿಗೆ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ಮಂಗಳೂರು ಈ ಸಂಸ್ಥೆಯ ಆಡಳಿತ ಮಂಡಳಿಯ ಪೂರ್ವಾನುಮತಿ ಪಡೆದು ನಂತರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮಗಳು 2000 ಗಳ ಪ್ರಕಾರ ಅನುಷ್ಠಾನಗೊಳಿಸುವುದು.

6. ಈ ಅನುದಾನವನ್ನು ಈ ಉದ್ದೇಶಿತ ಕಾಮಗಾರಿಗಳನ್ನು ಹೊರತುಪಡಿಸಿ ಬೇರೆ ಕಾಮಗಾರಿಗಳಿಗೆ ಅಥವಾ ವಾಹನ / ಇತ್ಯಾದಿ ವೆಚ್ಚಗಳಿಗೆ ಉಪಯೋಗಿಸತಕ್ಕದ್ದಲ್ಲ.
7. ಇದಕ್ಕೆ ಪ್ರತ್ಯೇಕವಾದ ಖಾತೆಯನ್ನು ತೆರೆದು ಲೆಕ್ಕಪತ್ರಗಳನ್ನು ನಿರ್ವಹಿಸಿಕೊಂಡು ಹೋಗತಕ್ಕದ್ದು.
8. ಈ ಉದ್ದೇಶಿತ ಯೋಜನೆಯ ಖರ್ಚು ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ:3245-60-200-0-16-ಸೈನ್ಸ್ ಅಂಡ್ ಟೆಕ್ನಾಲಜಿ ಸ್ಕೀಮ್ಸ್-101(ಯೋ)-ಗ್ರಾಂಟ್ ಇನ್-ಎಡ್ ಇದರ ಅಡಿಯಲ್ಲಿ ಭರಿಸತಕ್ಕದ್ದು.
9. ಈ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಹಾಜರು ಪಡಿಸಿದ ಬಿಲ್ಲುಗಳಿಗೆ ಮೇಲುರುಜು ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಮಾತ್ರ ನೀಡಲಾಗಿದೆ.
10. ಈ ಯೋಜನೆಗಳಿಗೆ ಬಿಡುಗಡೆ ಮಾಡಲಾದಂತ ಅನುದಾನದ ಬಗ್ಗೆ ಲೆಕ್ಕಪತ್ರಗಳನ್ನು ಸರ್ಕಾರವು/ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗ್ಗಿಗಿ ಕರೆದಾಗ ತಪ್ಪದೆ ಒದಗಿಸತಕ್ಕದ್ದು.
11. ಈಗ ಬಿಡುಗಡೆ ಮಾಡಿದ ಹಣವನ್ನು ಈ ಉದ್ದೇಶಿತ ಯೋಜನೆಗಾಗಿ ಮಾತ್ರ ಉಪಯೋಗಿಸತಕ್ಕದ್ದು ಮತ್ತು ಕಾರ್ಯಗತಗೊಳಿಸುವ ಚಟುವಟಿಕೆಯ ಮುಂಗಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯೋಜನೆಗೆ ವರ್ಗಾಯಿಸತಕ್ಕದ್ದಲ್ಲ.
12. ಉದ್ದೇಶಿತ ಈ ಯೋಜನೆಗೆ ಖರ್ಚಾಗದೆ ಬಾಬ್ತು ಉಳಿದಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದಿದ್ದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕುಗಳು ನೀಡುವ ಸರಳ ಬಡ್ಡಿ ವಿಧಿಸಿ ಸರ್ಕಾರಕ್ಕೆ ಪಾವತಿಸಿಕೊಳ್ಳಲಾಗುವುದು.
13. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಈ ಯೋಜನೆಯನ್ನು ನಿಯಮಾಗಳಿಗಳ ಪ್ರಕಾರ ಅನುಷ್ಠಾನಗೊಳಿಸಲು ಮತ್ತು ಈ ಯೋಜನೆಗೆ ಬಿಡುಗಡೆ ಮಾಡಲಾದಂತ/ಮಾಡಲಾಗುವ ಎಲ್ಲಾ ಅನುದಾನದ ಸದ್ಬಳಕೆಗೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.
14. ಈ ಯೋಜನೆಗಾಗಿ ಬಿಡುಗಡೆ ಮಾಡಲಾದಂತಹ ಹಣವನ್ನು ಉಪಯೋಗಿಸಿಕೊಂಡಿರುವುದಕ್ಕೆ ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕಪರಿಶೋಧಕರಿಂದ ದೃಢೀಕೃತ ತನಿಖಾ ವರದಿಗಳನ್ನು ಸರ್ಕಾರಕ್ಕೆ ಆಗಿಂದಾಗ್ಗೆ ಸಲ್ಲಿಸತಕ್ಕದ್ದು.
15. ಈ ಯೋಜನೆಗೆ ಈಗ ನೀಡಿದ ಅನುದಾನಕ್ಕಿಂತ ಹೆಚ್ಚಿನ ಅನುದಾನವನ್ನು ರಾಜ್ಯ ಸರ್ಕಾರದಿಂದ ನೀಡುವುದು ಸಾಧ್ಯವಿಲ್ಲ.
16. ಈ ಯೋಜನೆಯು ಪೂರ್ಣವಾಗಿ ಕಾರ್ಯಚರಣೆಗೆ ತೊಡಗಿದ ತಕ್ಷಣ ಈ ಯೋಜನೆಯ ಆವರ್ತಕ ವೆಚ್ಚವನ್ನು ಪಿಲಿಕುಳ ಪ್ರಾದೇಶಿ ವಿಜ್ಞಾನ ಕೇಂದ್ರ ಸೊಸೈಟಿಯು ತನ್ನ ಸ್ವಂತ ಆಂತರಿಕ ಆದಾಯದಿಂದ ಭರಿಸಿಕೊಳ್ಳತಕ್ಕದ್ದು.
17. ಉದ್ದೇಶಿತ ಈ ಯೋಜನೆಯ ನಿವೇಶನವು ಸರ್ಕಾರದ ಸಾಮ್ಯತೆಯಲ್ಲಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 303 ವೆಚ್ಚ-7/05 ದಿನಾಂಕ: 27.4.2005 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 82 ಎಂ ಮತ್ತು ಇ 2005, ದಿನಾಂಕ: 20.09.2005 ರಲ್ಲಿ ಸದರಿ ಇಲಾಖೆಗಳು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರುದ್ರಸ್ವಾಮಿ**

ಪೀಠಾಧಿಕಾರಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 142

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀಮತಿ ಇಂದುಮತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಸಿಆಸುಇ 33 ಎಸ್‌ಇಎನ್ 2004, ದಿನಾಂಕ: 13.09.2005.

2) ಶ್ರೀಮತಿ ಎಸ್. ಇಂದುಮತಿ, ಅಧೀನ ಕಾರ್ಯದರ್ಶಿ ಅವರ ದಿನಾಂಕ: 17.09.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಅಧೀನ ಕಾರ್ಯದರ್ಶಿ ಅವರು ವಸತಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, (1) ದಿನಾಂಕ: 30.01.2004 ರಿಂದ ದಿನಾಂಕ: 10.02.2004 ರವರೆಗೆ ಬ್ಯಾಡ್ಮಿಂಟನ್ ಪಂದ್ಯಾವಳಿಯಲ್ಲಿ ಭಾಗವಹಿಸಲು ವಿಶೇಷ ಸಾಂದರ್ಭಿಕ ರಜಾ ಉಪಯೋಗಿಸಿಕೊಳ್ಳಲು ಕೇಳಿಕೊಂಡಿದ್ದು, ವಿಧಾನ ಮಂಡಲದ ಕಾರ್ಯಕಲಾಪ ಪ್ರಾರಂಭವಾಗಿದ್ದರಿಂದ ಅದನ್ನು ತಿರಸ್ಕರಿಸಿ, ಕೆಲಸಕ್ಕೆ ಹಾಜರಾಗಬೇಕೆಂದು ತಿಳಿಸಿದ್ದರೂ ಸಹ ಅವರು ಸದರಿ ಸೂಚನೆ ಮೀರಿ ಬ್ಯಾಡ್ಮಿಂಟನ್ ಪಂದ್ಯಾವಳಿಯಲ್ಲಿ ಭಾಗವಹಿಸಿರುತ್ತಾರೆ. (2) ಸಂತೆಮಾರನಹಳ್ಳಿ ವಿಧಾನ ಸಭಾ ಕ್ಷೇತ್ರದ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ಶ್ರೀ ಫಯಾಜ್ ಅಹಮದ್ ಇವರ ಬದಲಿಗೆ ಶ್ರೀ ಪಟೇಲ್ ಮಾದಪ್ಪ ಬಿನ್ ಪಟೇಲ್ ಶಿವಣ್ಣ ಇವರನ್ನು ನೇಮಕ ಮಾಡುವ ಪ್ರಸ್ತಾವನೆಯನ್ನು ಮಾನ್ಯ ಮುಖ್ಯಮಂತ್ರಿಗಳು ಒಪ್ಪದೇ ಹಾಲಿ ಸದಸ್ಯರನ್ನು ಮುಂದುವರಿಸಲು ಕಡತದಲ್ಲಿ ಆದೇಶವಾಗಿತ್ತು. ಆದರೆ, ಆರೋಪಿತರು ಶ್ರೀ ಪಟೇಲ್ ಮಾದಪ್ಪನವರನ್ನು ಆಶ್ರಯ ಸಮಿತಿ ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಿದ ದುರ್ನಡತೆಯ ಆರೋಪಗಳಿಗಾಗಿ ಶ್ರೀಮತಿ ಎಸ್. ಇಂದುಮತಿ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 13.09.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 33 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 17ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ

ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05, ದಿನಾಂಕ: 23.08.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಿಚರ್ಡ್ ಲೋಬೋ, ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಹಾಗೂ ಶಾಸನ ರಚನಾ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಮಂಡನಾಧಿಕಾರಿಗಳು ಒದಗಿಸಲು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 144

**ವಿಷಯ:** ಪ್ರಾಯೋಗಿಕ ಆಧಾರದ ಮೇಲೆ ಕರ್ನಾಟಕ ಸರ್ಕಾರ ಕರೆ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ: 31.12.2004 ಮತ್ತು 8.04.2005 ರಂದು ನಡೆದ ಸರ್ಕಾರದ ಕಾರ್ಯದರ್ಶಿಗಳ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದ ಎಲ್ಲಾ ಭಾಗಗಳಲ್ಲಿರುವ ನಾಗರೀಕರು ತಮ್ಮ ತಮ್ಮ ಕೆಲಸಗಳಿಗಾಗಿ ವಿವಿಧ ಯೋಜನೆಗಳ ಮಾಹಿತಿ ಪಡೆಯಲು, ಅನುಸರಿಸಬೇಕಾದ ವಿಧಾನಗಳನ್ನು ತಿಳಿಯಲು, ಅನುಸರಣಾ ಕ್ರಮ ಮುಂತಾದವುಗಳಿಗಾಗಿ ಸರ್ಕಾರಿ ಕಛೇರಿಗಳನ್ನು ಸಂಪರ್ಕಿಸುತ್ತಿರುತ್ತಾರೆ. ಮಾಹಿತಿಯು ತಕ್ಷಣಕ್ಕೆ ಲಭ್ಯವಿಲ್ಲದಿರುವುದರಿಂದ, ಅಧಿಕಾರಿಗಳು ಪೂರ್ವನಿಯೋಜಿತ ಕಾರ್ಯಗಳಲ್ಲಿ ಮಗ್ನರಾಗಿರುವುದರಿಂದ, ವಿವರಗಳಿಲ್ಲದಿರುವ ಉತ್ತರಗಳಿಂದ ಮುಂತಾದ ಹಲವಾರು ಕಾರಣಗಳಿಂದಾಗಿ ಸರ್ಕಾರದಿಂದ ನಾಗರಿಕರಿಗೆ ಸರಿಯಾದ ಮಾಹಿತಿ ದೊರೆಯುತ್ತಿಲ್ಲ. ಸೂಕ್ತವಾದ ಸಂಪರ್ಕ ವ್ಯವಸ್ಥೆಯ ಕೊರತೆಯಿಂದಾಗಿ ಸರ್ಕಾರದ ಹಲವಾರು ಯೋಜನೆಗಳ ಲಾಭಗಳು ಸಾಮಾನ್ಯ ಜನತೆಗೆ ತಲುಪುತ್ತಿಲ್ಲ. ಈ ವಿಷಯವನ್ನು ದಿನಾಂಕ: 31.12.2004 ಮತ್ತು 8.04.2005 ರಂದು ಸರ್ಕಾರದ ಕಾರ್ಯದರ್ಶಿಗಳ ಸಭೆಯಲ್ಲಿ ಚರ್ಚಿಸಲಾಯಿತು. ನಾಗರಿಕರು ಕೇಳುವ ಬಹಳಷ್ಟು ಪ್ರಶ್ನೆಗಳು ಪುನರಾವೃತ್ತಿಯಾಗುವಂತಹವಿದ್ದು ಇಂತಹ ಮಾಹಿತಿಯನ್ನು ಕರೆ ಕೇಂದ್ರದಿಂದ ನೀಡಬಹುದಾಗಿದೆ. ನಾಗರಿಕರು ಕೇಳುವ ಪ್ರಶ್ನೆಗಳಿಗೆ ಮಾಹಿತಿ ಒದಗಿಸಲು ಸರ್ಕಾರಿ ಅಧಿಕಾರಿಗಳನ್ನು ನಿಯೋಜಿಸಲಾದ ಕರೆ ಕೇಂದ್ರವನ್ನು ಬಾಹ್ಯಮೂಲದಿಂದ ಸ್ಥಾಪಿಸಲು ಪ್ರಸ್ತಾಪಿಸಲಾಗಿದೆ. ಈ ಕರೆ ಕೇಂದ್ರದಲ್ಲಿ ಪ್ರಾರಂಭದಲ್ಲಿ ಸರ್ಕಾರಿ ಅಧಿಕಾರಿಗಳು ನಾಗರಿಕರ ಪ್ರಶ್ನೆಗಳಿಗೆ ಉತ್ತರಿಸುವರು. ಸರ್ಕಾರಿ ಅಧಿಕಾರಿಗಳು ನಾಗರಿಕರ ಪ್ರಶ್ನೆಗಳಿಗೆ ನೀಡುವ ಉತ್ತರಗಳು ಈ ಕೇಂದ್ರದಲ್ಲಿ ದಾಖಲಾಗುತ್ತವೆ. ಈ ಕರೆ ಕೇಂದ್ರಗಳಲ್ಲಿನ ಸಿಬ್ಬಂದಿಯ ಜ್ಞಾನ ವೃದ್ಧಿಗೊಂಡ ನಂತರ ಅಲ್ಲಿನ ಸರ್ಕಾರಿ ಅಧಿಕಾರಿಗಳನ್ನು ಹಿಂದಕ್ಕೆ ಪಡೆಯಲಾಗುವುದು. ಇದಲ್ಲದೆ, ರಾಜ್ಯ ಮಾಹಿತಿ ಕೇಂದ್ರದಲ್ಲಿನ ಭೂದಾಖಲೆಗಳು, ಖಜಾನೆ, ಸಾರಿಗೆ ಮುಂತಾದ ಇಲಾಖೆಗಳ ಮಾಹಿತಿಯು ನಾಗರೀಕರ ಪ್ರಶ್ನೆಗಳಿಗೆ ಉತ್ತರಿಸಲು ಸಹಕಾರಿಯಾಗುವುವು. ಒರಾಕಲ್ ಇಂಡಿಯ ಪ್ರೈವೇಟ್ ಲಿಮಿಟೆಡ್ ಸಂಸ್ಥೆಯು ಈ ಯೋಜನೆಯನ್ನು ಪ್ರಾಯೋಗಿಕವಾಗಿ ನಾಲ್ಕು ತಿಂಗಳುಗಳ ಅವಧಿಗೆ ಉಚಿತವಾಗಿ ಅನುಷ್ಠಾನಗೊಳಿಸಲು ಆಸಕ್ತಿ ತೋರಿದ್ದು, 25.00 ಲಕ್ಷ ರೂ.ಗಳ ವೆಚ್ಚದಲ್ಲಿ ಕರೆ ಕೇಂದ್ರವನ್ನು ಕರ್ನಾಟಕ ಸರ್ಕಾರದ ಯಾವುದೇ ಋಣ ಇಲ್ಲದೇ ತಮ್ಮ ಸಂಸ್ಥೆಯಿಂದಲೇ ಸ್ಥಾಪಿಸಲು ಮುಂದೆ ಬಂದಿರುತ್ತಾರೆ. ಅಂತೆಯೇ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 42 ವಿಮಾಅ 2005, ಬೆಂಗಳೂರು, ದಿನಾಂಕ: 17ನೇ ಜನವರಿ 2006**

ಒರಾಕಲ್ ಇಂಡಿಯ ಪ್ರೈವೇಟ್ ಲಿಮಿಟೆಡ್ ಸಂಸ್ಥೆಯು ಬೆಂಗಳೂರಿನಲ್ಲಿ ಪ್ರಾಯೋಗಿಕವಾಗಿ ನಾಲ್ಕು ತಿಂಗಳ ಅವಧಿಗೆ, ಸರ್ಕಾರದ ಯಾವುದೇ ಋಣವಿಲ್ಲದೆ, 25.00 ಲಕ್ಷ ರೂ.ಗಳ ವೆಚ್ಚದಲ್ಲಿ ಸರ್ಕಾರಿ ಕರೆ ಕೇಂದ್ರವನ್ನು ಸ್ಥಾಪಿಸುವ ಪ್ರಸ್ತಾವನೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

2. ಈ ಪ್ರಾಯೋಗಿಕ ಕರೆ ಕೇಂದ್ರವು ಕಂದಾಯ ಇಲಾಖೆ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೃಷಿ ಇಲಾಖೆ, ಒಳಾಡಳಿತ ಇಲಾಖೆಗಳನ್ನು ಒಳಗೊಳ್ಳಲಿದ್ದು, ಈ ಇಲಾಖೆಗಳು ಸಂಸ್ಥೆಗೆ ಅವಶ್ಯವಿರುವ ಮಾಹಿತಿಯೊಂದಿಗೆ ಸಂಬಂಧಪಟ್ಟ ಅಧಿಕಾರಿಗಳನ್ನು ನಿಯೋಜಿಸುತ್ತವೆ. ನಾಲ್ಕು ತಿಂಗಳುಗಳ ಈ ಅವಧಿಯಲ್ಲಿ ನಾಗರಿಕರ ಪ್ರತಿಕ್ರಿಯೆಗಳನ್ನು ಗಮನಿಸಿ ಸರ್ಕಾರವು ಈ ಕರೆ ಕೇಂದ್ರಗಳ ಸ್ಥಾಪನೆಯನ್ನು ಸ್ಪರ್ಧಾತ್ಮಕ ಹರಾಜಿನ ಮೂಲಕ ಮುಂದುವರಿಸಲು ತೀರ್ಮಾನಿಸುವುದು.

3. ಈ ಕರೆ ಕೇಂದ್ರಕ್ಕೆ ಬೇಕಾಗುವ ಇತರ ಮಾಹಿತಿಯನ್ನು ರಾಜ್ಯ ಮಾಹಿತಿ ಕೇಂದ್ರದಿಂದ ಪಡೆಯಲು ಸರ್ಕಾರವು ಪ್ರವೇಶಾವಕಾಶವನ್ನು ಕಲ್ಪಿಸುವುದು. ಈ ಕರೆ ಕೇಂದ್ರಕ್ಕೆ ಬೇಕಾಗುವ ಒಂದು ಅಥವಾ ಎರಡು ಸರ್ವರ್ ಅಳವಡಿಸಲು ಮತ್ತು ಕರೆ ಕೇಂದ್ರದಿಂದ ರಾಜ್ಯ ಮಾಹಿತಿ ಕೇಂದ್ರಕ್ಕೆ ಪ್ರವೇಶಾವಕಾಶ ಕಲ್ಪಿಸಲು ತಗಲುವ ವೆಚ್ಚವನ್ನು 8.00 ಲಕ್ಷ ರೂ.ಗಳಿಗೆ ಮೀರದಂತೆ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಇ-ಆಡಳಿತ ಸಚಿವಾಲಯದ ಲೆಕ್ಕ ಶೀರ್ಷಿಕೆ "3451-00-090-2-04-059 ಇತರೆ ವೆಚ್ಚಗಳು" (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರಗಳ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ, ಇ-ಆಡಳಿತ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಸು).

ಪಿ.ಆರ್. 146

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಉಡುವಳ್ಳಿ ಕೆರೆಗೆ ಫೋಷಕ ನಾಲೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಮುಂಗಡ ಠೇವಣಿ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 16.08.2005ರ ಪತ್ರ ಸಂಖ್ಯೆ: ಮುಸನೀ(ದ)/ಲೆಶಾ:ಲೆಸ1:1(2):ಭೂಸ್ವಾಧೀನ:2005-06/1754.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.08.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಉಡುವಳ್ಳಿ ಕೆರೆಗೆ ಫೋಷಕ ನಾಲೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಬೇಕಾದ ಜಮೀನುಗಳಿಗೆ ಹಣ ಠೇವಣಿ ಇರಿಸುವ ಬಗ್ಗೆ ರೂ.19,61,000/- ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

ಹಿರಿಯೂರು ತಾಲ್ಲೂಕು ಪರಮೇನಹಳ್ಳಿ ಗ್ರಾಮದ ರಿ.ಸ.ನಂ42, 43 ರಲ್ಲಿನ ಭೂಸ್ವಾಧೀನಕ್ಕೆ ಪ್ರಸ್ತಾಪಿಸಿದೆ ಒಟ್ಟು 26 ಎಕರೆ 20 ಗುಂಟೆ ಹಾಗೂ ಉಡುವಳ್ಳಿ ಗ್ರಾಮದ ರಿ.ಸ.ನಂ.40, 41, 42 ಮತ್ತು 73 ರಲ್ಲಿ ಭೂಸ್ವಾಧೀನಕ್ಕೆ ಪ್ರಸ್ತಾಪಿಸಿದ ಒಟ್ಟು 16ಎಕರೆ 30 ಗುಂಟೆ ಜಮೀನು ಒಟ್ಟು 43 ಎಕರೆ 10 ಗುಂಟೆ ಖುಷ್ಕಿ ಜಮೀನಿಗೆ ಭೂಪರಿಹಾರದ ಅಂದಾಜು ವೆಚ್ಚದ ಮೊತ್ತದ ತಃಖ್ತೆಯನ್ನು ಉಪವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗರವರು ಕೊಟ್ಟಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆ ಕಲಂ 4(1)ರ ಅಧಿಸೂಚನೆಯನ್ನು ಹೊರಡಿಸುವ ಪೂರ್ವದಲ್ಲಿ ರೂ.19,61,000/- ಗಳನ್ನು ಠೇವಣಿ ಇರಿಸಿದ ನಂತರ ಭೂಮಿಯನ್ನು ಸಣ್ಣ ನೀರಾವರಿ ವಶಕ್ಕೆ ನೀಡಲಾಗುವುದೆಂದು ವರದಿ ಮಾಡಿರುತ್ತರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 186 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಲ್ಲೂಕು ಉಡುವಳ್ಳಿ ಗ್ರಾಮದ ಕೆರೆಗೆ ಫೋಷಕನಾಲೆ ನಿರ್ಮಾಣಕ್ಕಾಗಿ ಉಡುವಳ್ಳಿ ಗ್ರಾಮದ ರಿ.ಸ.ನಂ.40, 41, 42 ಮತ್ತು 73 ರಲ್ಲಿ ಒಟ್ಟು 16.30 ಎಕರೆ ಜಮೀನು ಹಾಗೂ ಪರಮೇನಹಳ್ಳಿ ಗ್ರಾಮದ ರಿ.ಸ.ನಂ.42, 43 ರಲ್ಲಿ ಒಟ್ಟು 26-20 ಎಕರೆ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಮುಂಗಡ ಠೇವಣಿಯಾಗಿ ರೂ.19,61,000/- (ಹತ್ತೊಂಭತ್ತು ಲಕ್ಷದ ಅರವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗರವರಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು. ಹಾಗೂ ಎರಡನೇ ಸಾರಿ ಪಾವತಿಸದಂತೆ ಎಚ್ಚರ ವಹಿಸುವುದು. ಠೇವಣಿ ಇಟ್ಟ ನಂತರ ಸದರಿ ಜಮೀನುಗಳನ್ನು ತಕ್ಷಣವೇ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ತೆಗೆದುಕೊಳ್ಳಲು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಸೂಕ್ತ ಕ್ರಮ ತೆಗೆದುಕೊಳ್ಳುವುದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ: 12.06.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 143 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಕೆ.ಹೆಚ್.ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್ ಕೊರಟಗೆರೆ ತಾಲ್ಲೂಕು ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ತುಮಕೂರು ಜಿಲ್ಲಾಧಿಕಾರಿಗಳ ಪತ್ರ ಸಂ:ಸಿಬ್ಬಂದಿ(1)ಸಿಸಿಎ:ವಿವ:5/2004-05 ದಿನಾಂಕ: 30-11-2004.
2) ಶ್ರೀಮತಿ ಭಾಗ್ಯವತಮ್ಮ ತಹಶೀಲ್ದಾರ್ ಮತ್ತು ಇತರ ನೌಕರರಿಗೆ ನೀಡಿರುವ ತಿಳುವಳಿಕೆ ಪತ್ರ ಸಂ:ಕಂಇ:51:ಎಡಿಇ:04,ದಿನಾಂಕ:2-3-2005.
3) ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ
   (1) ಶ್ರೀಮತಿ ಭಾಗ್ಯವತಮ್ಮ ತಹಶೀಲ್ದಾರ್, ದಿ: 2-4-2005
   (2) ಶ್ರೀ ಕೆ.ವಾಸುದೇವರಾಜು,ಶಿರಸ್ತೇದಾರ್,ದಿ:28-4-2005
   (3) ಶ್ರೀ ಬಿ.ಎಂ.ಗಂಗರಾಜು,ರಾಜಸ್ವ ನಿರೀಕ್ಷಕರು,ದಿ:30-3-05
   (4) ಶ್ರೀ ಸಿ.ಎಸ್.ತಿಮ್ಮಯ್ಯ ರಾಜಸ್ವ ನಿರೀಕ್ಷಕರು,ಬಾಗಶ ಉತ್ತರ ದಿ:30-3-05
   (5) ಶ್ರೀ ಕೆಂಪರಾಮಯ್ಯ,ಗ್ರಾಮ ಲೆಕ್ಕಿಗರು,ದಿ:30-3-05

**ಪ್ರಸ್ತಾವನೆ:**

ಶ್ರೀಮತಿ ಭಾಗ್ಯವತಮ್ಮ ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಮತ್ತಿತರ 4 ಮಂದಿ ಸಿಬ್ಬಂದಿಯವರು ಶ್ರೀ ಲೋಕೇಶ್ ಬಿನ್ ಕೆ.ಬಿ.ಬಸವರಾಜು ಇವರಿಗೆ ನಿಯಮ ಉಲ್ಲಂಘಿಸಿ ಅಕ್ರಮವಾಗಿ ಬಿಸಿಎಂ(B)ದೃಢೀಕರಣ ಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದರಿಂದ ಸದರಿಯವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ.ಸಂ(1)ರಲ್ಲಿ ಓದಲಾದ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1ರಿಂದ ivರವರೆಗೆ)ಆರೋಪಿತ ಅಧಿಕಾರಿ/ನೌಕರರಿಗೆ ಜಾರಿ ಮಾಡಿ ಆರೋಪಗಳ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿ:2-3-05ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ/ನೌಕರರಲ್ಲಿ ಮೇಲೆ ಓದಲಾದ ಕ್ರ.ಸಂ(3)ರಲ್ಲಿ ಶ್ರೀಮತಿ ಭಾಗ್ಯವತಮ್ಮ ಶ್ರೀ ವಾಸುದೇವರಾಜು, ಶ್ರೀ ಬಿ.ಎಂ.ಗಂಗರಾಜು ಮತ್ತು ಶ್ರೀ ಕೆಂಪರಾಮಯ್ಯ ರವರುಗಳ ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಉಳಿದ ನೌಕರರಾದ ಶ್ರೀ ತಿಮ್ಮಯ್ಯ ಇವರ ಭಾಗಶ: ಉತ್ತರ ನೀಡಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಅದೇಶಿಸಿದೆ

**ಸರ್ಕಾರದ ಅದೇಶ ಸಂಖ್ಯೆ: ಕಂಇ:51:ಎಡಿಇ:2004, ಬೆಂಗಳೂರು ದಿನಾಂಕ: 02-1-2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.643,10ನೇ ಮುಖ್ಯ ರಸ್ತೆ,6ನೇ ಬ್ಲಾಕ್,ರಾಜಾಜಿನಗರ, ಬೆಂಗಳೂರು-560010 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

(1) ಶ್ರೀಮತಿ ಭಾಗ್ಯವತಮ್ಮ ತಹಶೀಲ್ದಾರ್,
(2) ಶ್ರೀ ಕೆ.ವಾಸುದೇವರಾಜು,ಶಿರಸ್ತೇದಾರ್,
(3) ಶ್ರೀ ಬಿ.ಎಂ.ಗಂಗರಾಜು,ರಾಜಸ್ವ ನಿರೀಕ್ಷಕರು,
(4) ಶ್ರೀ ಸಿ.ಎಸ್.ತಿಮ್ಮಯ್ಯ ರಾಜಸ್ವ ನಿರೀಕ್ಷಕರು,
(5) ಶ್ರೀ ಕೆಂಪರಾಮಯ್ಯ,ಗ್ರಾಮ ಲೆಕ್ಕಿಗರು,

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯ ಅವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಅದೇಶ ಸಂಖ್ಯೆ:ಸಿಆಸುಇ:45:ಸೇಇವಿ:2001ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ)ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ತುಮಕೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 126 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಲಾಲ್‌ಸಿಂಗ್ ನಾಯಕ್,ತಹಶೀಲ್ದಾರ್,ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು,ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಜಿವಿಲ್‌ಬಿ-19/ಸಿಆರ್-4/2005/ಕೊಪ್ಪಳ ದಿನಾಂಕ:14-12-2005.

2) ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಕಂದಾಯ:ಸಿಬ್ಬಂದಿ-1/120/05-06/7423, ದಿನಾಂಕ: 9-12-2005.

**ಪ್ರಸ್ತಾವನೆ:**

ಶ್ರೀ ಲಾಲ್‌ಸಿಂಗ್ ನಾಯಕ್,ತಹಶೀಲ್ದಾರ್,ಕುಷ್ಠಗಿ, ತಾಲ್ಲೂಕು ಇವರು ಫಿರ್ಯಾದುದಾರರಾದ ಶ್ರೀ ರಾಮಣ್ಣ ಬಿನ್ ಮುನಿಯಪ್ಪ ಚೆಂಡೂರ್ ಮತ್ತು ಅವರ 8 ಮಂದಿ ದಾಯಾಧಿಗಳಿಗೆ ಕುಷ್ಠಗಿ ತಾಲ್ಲೂಕಿನ ಹಿರೇತಮ್ಮಿನಾಳ ಗ್ರಾಮದ ಸಂ:ನಂ 95ರಲ್ಲಿ 27-00ಎಕರೆ ಜಮೀನನ್ನು ಅಕ್ರಮ-ಸಕ್ರಮ ಯೋಜನೆಯಡಿಯಲ್ಲಿ ಜಮೀನು ಮಂಜೂರು ಮಾಡಲು ರೂ15,000/-ಗಳ ಅಕ್ರಮ ಸಂಭಾವನೆಯನ್ನು ರಾತ್ರಿ 8.00ಗಂಟೆಯ ಸಮಯದಲ್ಲಿ ತಮ್ಮ ಮನೆಯಲ್ಲಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಲಂಚದ ಹಣದೊಂದಿಗೆ ಸಿಕ್ಕಿಬಿದ್ದಿರುವುದರಿಂದ ಅವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ತಿಳಿಸಿ,ಆರೋಪಿತರು ಸುಗಮ ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ

ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸಿ ಅವರ ಲೀನ್ ಅನ್ನು(ಸ್ಥಾನವನ್ನು)ಬೇರೆ ಕಡೆಗೆ ವರ್ಗಾಯಿಸುವಂತೆ ಅಪರ ಪೊಲೀಸ್ ಮಹಾ ನಿರ್ದೇಶಕರು,ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ:14-12-2005ರ ಪತ್ರದಲ್ಲಿ ಕೋರಿರುತ್ತಾರೆ.

ಈ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ:63:ಎಡಿಇ:2005, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು ಕೊಪ್ಪಳ ಜಿಲ್ಲೆ ಇವರನ್ನು ಅವರ ವಿರುದ್ಧದ ಭ್ರಷ್ಟಾಚಾರ ಆರೋಪದ ವಿಚಾರಣೆಯನ್ನು ಬಾಕಿಯಿಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಲಾಲ್‌ಸಿಂಗ್‌ನಾಯಕ್, ತಹಶೀಲ್ದಾರ್ ಇವರು ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿಗಳ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಆಪಾದಿತ ಅಧಿಕಾರಿಯು ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 150 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ವಸತಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 02 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಅಬ್ದುಲ್ ಕರೀಂ,<br>ಚರ್ಚ್ ರಸ್ತೆ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 2 | ಶ್ರೀ ಹೆಗ್ಗೆರೆ ಕೆಂಚಪ್ಪ,<br>ಮಾಜಿ ಮುನ್ಸಿಪಲ್ ಸದಸ್ಯರು, ಹರಿಶ್ಚಂದ್ರಘಾಟ್, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 3 | ಶ್ರೀ ಪನ್ನೀರ್ ಸೇಲ್ವಂ,<br>ಮಾಜಿ ಮುನ್ಸಿಪಲ್ ಅಧ್ಯಕ್ಷರು, ಪೋದಿಯಮ್ಮ ದೇವಸ್ಥಾನ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 4 | ಶ್ರೀಮತಿ ಸೌಭಾಗ್ಯವತಿದೇವರು,<br>ಮಾಜಿ ಮುನ್ಸಿಪಲ್ ಸದಸ್ಯರು ಲಯನೆಸ್ ಮುಖ್ಯ ರಸ್ತೆ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 145 ಪೀಠಾಧಿಕಾರಿ-2, ವಸತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ನೀರಾವರಿ ಇಲಾಖೆಯ ತಾಂತ್ರಿಕ ಹುದ್ದೆಗಳಾದ ಜಂಟಿ ಕಾರ್ಯದರ್ಶಿ (ಎಂಎಂಐ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳು, ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3 ಹಾಗೂ ವಿಶ್ವಬ್ಯಾಂಕ್ ಶಾಖೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 1.9.82 ಸಂಖ್ಯೆ: ಡಿಪಿಎಆರ್ 470 ಎಸ್‌ಜಿಬಿ 82ರ ಸರ್ಕಾರಿ ಆದೇಶ.
2) ದಿನಾಂಕ: 23.4.2001 ಸಂಖ್ಯೆ: ಸಿಆಸುಇ 1 ಸಸಿವಿ 99ರ ಸರ್ಕಾರಿ ಆದೇಶ.
3) ದಿನಾಂಕ: 19.11.2001 ಸಂಖ್ಯೆ: ಸಿಆಸುಇ 40 ಸಸಿವಿ 2001ರ ಸರ್ಕಾರಿ ಆದೇಶ.
4) ಅ.ಟಿ. ಸಂಖ್ಯೆ: ಜಿಸಂಇ ಎಂಎಂಕೆ 2005, ದಿನಾಂಕ: 20.12.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ನೀರಾವರಿ ಶಾಖೆ ಮತ್ತು ಸೇವೆಗಳು ಶಾಖೆಯಲ್ಲಿ ಅಸ್ತಿತ್ವದಲ್ಲಿರುವ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| I | 1. ಸರ್ಕಾರದ ಉಪ ಕಾರ್ಯದರ್ಶಿ (ನೀರಾವರಿ) (ಹಿಂದಿನ ವಿಶೇಷ ಕರ್ತವ್ಯಾಧಿಕಾರಿ) | ಒಂದು |
| | 2. ಶೀಘ್ರಲಿಪಿಗಾರ | ಒಂದು |
| | 3. ಕಿರಿಯ ಸಹಾಯಕ | ಒಂದು |
| | 4. ದಲಾಯತ್ | ಒಂದು |
| | **ಒಟ್ಟು** | **ನಾಲ್ಕು** |
| II | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-2) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕರು | ಎರಡು |
| | 4. ಸಹಾಯಕರು | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಒಂಭತ್ತು** |
| III | **ವಿಶ್ವ ಬ್ಯಾಂಕ್ ಶಾಖೆ** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಸಹಾಯಕ | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಎಂಟು** |
| IV | 1. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಇ) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಶೀಘ್ರಲಿಪಿಗಾರ | ಒಂದು |
| | 5. ಸಹಾಯಕ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ದಲಾಯತ್ | ಒಂದು |
| | **ಒಟ್ಟು** | **ಏಳು** |

ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಎಲ್ಲಾ ಹುದ್ದೆಗಳನ್ನು ದಿನಾಂಕ: 1.1.2001 ರಿಂದ ದಿನಾಂಕ: 31.12.2001 ರವರೆಗೆ ಮುಂದುವರೆಸಲಾಗಿದೆ ಹಾಗೂ ಜಂಟಿ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ ಹುದ್ದೆಯನ್ನು ದಿನಾಂಕ: 10.11.2000 ರಿಂದ ಜಾರಿಗೆ ಬರುವಂತೆ ಉಪ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ ಎಂದು ನಿಮ್ನೀಕರಿಸಲಾಗಿದೆ.

ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ಅಧೀನ ಕಾರ್ಯದರ್ಶಿ, ತಾಂತ್ರಿಕ-2, ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3 ಹುದ್ದೆಯನ್ನು ದಿನಾಂಕ: 31.12.2001 ರವರೆಗೆ ರೂ.9580-14200ರ ವೇತನ ಶ್ರೇಣಿಯ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಮಧ್ಯಮ ಮತ್ತು ಬಾರಿ ನೀರಾವರಿ ಶಾಖೆ-3 ಎಂದು ತಾತ್ಕಾಲಿಕವಾಗಿ ಉನ್ನತೀಕರಿಸಲಾಗಿದೆ. ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ.

ಕ್ರಮ ಸಂಖ್ಯೆ (4)ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸಲು ಇಲಾಖೆಯ ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.1.2006 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| I | 1. ಸರ್ಕಾರದ ಉಪ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | ಒಂದು |
| | 2. ಶೀಘ್ರಲಿಪಿಗಾರ | ಒಂದು |
| | 3. ಕಿರಿಯ ಸಹಾಯಕ | ಒಂದು |
| | 4. ದಲಾಯತ್ | ಒಂದು |
| | **ಒಟ್ಟು** | **ನಾಲ್ಕು** |
| II | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3** | |
| | 1. ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕರು | ಎರಡು |
| | 4. ಸಹಾಯಕರು | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಒಂಭತ್ತು** |
| III | **ವಿಶ್ವ ಬ್ಯಾಂಕ್ ಶಾಖೆ** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಸಹಾಯಕ | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಎಂಟು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 147 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಅಬ್ದುಲ್ ಖಯ್ಯೂಂ, ಹಿಂದಿನ ನಿರ್ದೇಶಕರು, ಕಾಲೇಜು ಶಿಕ್ಷಣ ನಿರ್ದೇಶನಾಲಯ ಮತ್ತು ಶ್ರೀ ಕೆ.ಎಸ್. ಶ್ರೀವತ್ಸ, ಹಿಂದಿನ ಜನರಲ್ ಮ್ಯಾನೇಜರ್, ಕೆ.ಎಸ್.ಐ.ಎಂ.ಸಿ. ಲಿಮಿಟೆಡ್, ಬೆಂಗಳೂರು ರವರುಗಳ ವಿರುದ್ಧ ದಾಖಲಿಸಿರುವ ಕ್ರಿಮಿನಲ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.37/1994 ದಿನಾಂಕ: 09.09.2005.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ಖಯ್ಯೂಂರವರು 1992-93ನೇ ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದಾಗ ವಿವಿಧ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಕಳಪೆ ದರ್ಜೆಯ ಮರದ ಡೆಸ್ಕ್‌ಗಳನ್ನು ಖರೀದಿಸಿ, ಅವುಗಳನ್ನು ತೇಗದ ಮರದಿಂದ ಮಾಡಿದವುಗಳೆಂಬುದಾಗಿ, ಶ್ರೀ ಕೆ.ಎಸ್.ಶ್ರೀವತ್ಸ, ಜನರಲ್ ಮ್ಯಾನೇಜರ್, ಕೆ.ಎಸ್.ಐ.ಎಂ.ಸಿ. ರವರಿಂದ ಸುಳ್ಳು ದೃಢೀಕರಣ ಪತ್ರವನ್ನು ಪಡೆದು ಬೆಂಗಳೂರಿನ 5 ಖಾಸಗಿ ಸಂಸ್ಥೆಗಳಿಂದ ಖರೀದಿಸಿ ಒಟ್ಟು ರೂ.39,93,792.30 ಗಳನ್ನು ಪಾವತಿಸಿರುತ್ತಾರೆ. ರಾಜ್ಯದ ತುಮಕೂರು, ಧಾರವಾಡ, ಬೆಳಗಾಂ, ಬಿಜಾಪುರ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ, ಹಾಸನ, ಮೈಸೂರು, ಮಂಡ್ಯ, ಕೊಡಗು, ಬೆಂಗಳೂರು ನಗರ ಮತ್ತು ಗ್ರಾಮಾಂತರ, ರಾಯಚೂರು ಹಾಗೂ ಗುಲ್ಬರ್ಗಾ ಜಿಲ್ಲೆಗಳ ವಿವಿಧ ಪ್ರಥಮ ದರ್ಜೆ ಕಾಲೇಜುಗಳಿಗೆ ಮರದ ಡೆಸ್ಕ್‌ಗಳನ್ನು ಖರೀದಿ ಮಾಡುವಾಗ ತೇಗದ ಮರದ ಡೆಸ್ಕ್‌ಗಳೆಂಬುದಾಗಿ ದೃಢೀಕರಿಸಿ ಅದರ ಬದಲಾಗಿ ಸಾಮಾನ್ಯ ದರ್ಜೆಯ ಜಾತಿಯ ಮರವನ್ನು ಉಪಯೋಗಿಸಿದ ಡೆಸ್ಕ್‌ಗಳನ್ನು ಪೂರೈಸಲು ಕಾರಣರಾಗಿರುತ್ತಾರೆ.

ಈ ಬಗ್ಗೆ ಮಾನ್ಯ ಲೋಕಾಯುಕ್ತವು ಸವಿವರವಾದ ತನಿಖೆ ನಡೆಸಿ ಸದರಿ ಡೆಸ್ಕ್‌ಗಳ ಮರದ ಸ್ಯಾಂಪಲ್‌ಗಳನ್ನು ಪಡೆದು, "Indian Council of Forestry Research and Education Dehradun" ಸಂಸ್ಥೆಗೆ ಕಳುಹಿಸಿ ಸದರಿ ಮರದ ಸ್ಯಾಂಪಲ್‌ಗಳು ತೇಗದ ಮರದಿಂದ

ಮಾಡಿದವುಗಳೇ ಅಥವಾ ಇಲ್ಲವೆ ಎಂಬ ಬಗ್ಗೆ ತಜ್ಞರ ಅಭಿಪ್ರಾಯ ಪಡೆದಿದ್ದು, 'ಐಡೆಂಟಿಫಿಕೇಷನ್' ವರದಿಯಂತೆ ಸದರಿ ರಿವರ್ಸಿಬಲ್ ಡೆಸ್ಕ್‌ಗಳ ಪೈಕಿ ಕೇವಲ 155 ಮಾದರಿಗಳು (ಡೆಸ್ಕ್‌ಗಳು) ಮಾತ್ರ ತೇಗದ ಮರದ್ದಾಗಿದ್ದು ಉಳಿದೆಲ್ಲವೂ ಬೇರೆ ರೀತಿ ಕಾಡು ಜಾತಿಯ ಮರದ್ದೆಂದು ತಿಳಿಸಿದ್ದಾರೆ. ಇದರಿಂದಾಗಿ ಸರ್ಕಾರಕ್ಕೆ ರೂ.38.62 ಲಕ್ಷ ನಷ್ಟ ಉಂಟು ಮಾಡಿರುವುದು ತನಿಖೆಯಿಂದ ದೃಢಪಟ್ಟಿರುತ್ತದೆ. ಪ್ರಾಥಮಿಕ ವಿಚಾರಣೆಯನ್ನು ಪೂರ್ಣಗೊಳಿಸಿದ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗ ಶ್ರೀ ಅಬ್ದುಲ್ ಖಯ್ಯೂಂರವರು ಎಸಗಿದ ದುರ್ನಡತೆ ಬಗ್ಗೆ ಅವರನ್ನು ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಮೇಲೆ ಉಲ್ಲೇಖದಲ್ಲಿನ ಪತ್ರದಲ್ಲಿ ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸಕ್ಷಮ ಪ್ರಾಧಿಕಾರವು ನಿವೃತ್ತ ಅಧಿಕಾರಿಯ ನಿವಾಸ ಮತ್ತು ಕಛೇರಿಗಳ ಮೇಲೆ ದಾಳಿ ನಡೆಸಿ ಜಪ್ತಿ ಮಾಡಲಾದ ವಿವರಗಳನ್ನು, ಮರ ತಜ್ಞರ ವರದಿಯನ್ನು ಮತ್ತು ಸರ್ಕಾರಕ್ಕೆ ಉಂಟಾದ ನಷ್ಟದ ಅಂಕಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 165 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 20ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಅಬ್ದುಲ್ ಖಯ್ಯೂಂ, ನಿವೃತ್ತ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರನ್ನು ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆ (ಸಿ.ಆರ್.ಪಿ.ಸಿ.) ಕಲಂ 197ರ ಪ್ರಕಾರ ಸರ್ಕಾರ ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 148

**ವಿಷಯ:** ಶ್ರೀ ಬಿ.ಎಫ್. ತಳವಾರ್, ಕೆಎಎಸ್ ಅಧಿಕಾರಿ, ಶ್ರೀ ಗೋಪಾಲನಾಯಕ್, ರಾಜಸ್ವ ನಿರೀಕ್ಷಕರು, ಮತ್ತು ಶ್ರೀ ಬಿ.ರಾಮಪ್ಪ, ಗ್ರಾಮ ಲೆಕ್ಕಾಧಿಕಾರಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ: ಸಿಆಸುಇ 90 ಎಸ್‌ಇಎನ್ 2004, ದಿನಾಂಕ: 18.03.2005.
2) ಶ್ರೀ ಬಿ.ಎಫ್. ತಳವಾರ್, ಕೆಎಎಸ್ ಅಧಿಕಾರಿ ಅವರ ದಿನಾಂಕ: 13.05.2005ರ ಲಿಖಿತ ಉತ್ತರ.
3) ಶ್ರೀ ಗೋಪಾಲನಾಯ್ಕ, ವ್ಯವಸ್ಥಾಪಕರು, ತಾಲ್ಲೂಕು ಪಂಚಾಯಿತಿ ಅವರ ದಿನಾಂಕ: 15.04.2005ರ ಲಿಖಿತ ಉತ್ತರ.
4) ಶ್ರೀ ಬಿ. ರಾಮಪ್ಪ, ನಿವೃತ್ತ ಗ್ರಾಮ ಲೆಕ್ಕಿಗ ಅವರ ದಿನಾಂಕ: 25.04.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ ಚೆನ್ನಗಿರಿ ತಾಲ್ಲೂಕ್ ಕಛೇರಿಯಲ್ಲಿ ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ಬಿ.ಎಫ್. ತಳವಾರ್ ಅವರು, ಚೆನ್ನಗಿರಿ ತಾಲ್ಲೂಕು ಬಸವಪಟ್ಟಣ ಹೋಬಳಿ ರಾಜಸ್ವ ನಿರೀಕ್ಷಕರ ಹುದ್ದೆಯಲ್ಲಿ ಶ್ರೀ ಗೋಪಾಲನಾಯ್ಕರವರು ಹಾಗೂ ಕತ್ತಲಗಿರಿ ಗ್ರಾಮ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಶ್ರೀ ಬಿ.ರಾಮಪ್ಪ ರವರು ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 26.08.99 ರಂದು ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕ್ ಹುಚ್ಚಂಗಿ ದುರ್ಗದಲ್ಲಿನ ಹೊಂಡದಲ್ಲಿ ಖಾಸಗಿ ಬಸ್ ಅಪಘಾತದಲ್ಲಿ ಬಿದ್ದು ಮೃತರಾದವರ ಪೈಕಿ ಒಂದೇ ಕುಟುಂಬಕ್ಕೆ ಸೇರಿದ 5 ಜನ ವಾರಸುದಾರರಿಗೆ ತಲಾ ರೂ.1.00 ಲಕ್ಷದಂತೆ ಮಂಜೂರಾದ ಹಣವನ್ನು ಸಂಬಂಧಪಟ್ಟ ವಾರಸುದಾರರಲ್ಲದ ಬೇರೆಯವರಿಗೆ ಸಂದಾಯ ಮಾಡಿ ಮೃತರ ಕುಟುಂಬಕ್ಕೆ ಮತ್ತು ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪದ ಸಂಬಂಧ ಮೇಲ್ಕಂಡ ಅಧಿಕಾರಿ / ನೌಕರರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 18.03.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತ ಅಧಿಕಾರಿ / ನೌಕರರುಗಳು ಮೇಲ್ಕಂಡ ನೋಟೀಸಿಗೆ ಕ್ರಮವಾಗಿ ಉತ್ತರ ಸಲ್ಲಿಸಿರುತ್ತಾರೆ. ಅವರುಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 18ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರೊಡನೆ 13ನ್ನು ಓದಿಕೊಂಡಂತೆ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಎಫ್. ತಳವಾರ್, ಕೆಎಎಸ್ ಅಧಿಕಾರಿ, ಶ್ರೀ ಗೋಪಾಲನಾಯ್ಕ, ರಾಜಸ್ವ ನಿರೀಕ್ಷಕರು, ಮತ್ತು ಶ್ರೀ ಬಿ. ರಾಮಪ್ಪ, ಗ್ರಾಮ ಲೆಕ್ಕಾಧಿಕಾರಿ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಮಾಡಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005 ದಿನಾಂಕ: 23.08.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಕ್ರಮ ಕೈಗೊಳ್ಳುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವೆಗಳು-3).

ಪಿ.ಆರ್. 149

## ಕಂದಾಯ ಸಚಿವಾಲಯ

**ವಿಷಯ:** ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಮಿತಿಗೆ ನೇಮಕ ಮಾಡಿರುವ ಆಡಳಿತಾಧಿಕಾರಿಯ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೊಸೊ 2004, ದಿನಾಂಕ: 01.10.2004.

2) ಉಚ್ಚ ನ್ಯಾಯಾಲಯದ ಆದೇಶ ರಿಟ್ ಅರ್ಜಿ ಸಂಖ್ಯೆ: 41816/2004 ರಲ್ಲಿ ದಿನಾಂಕ: 30.09.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕಾರವಾರ ವಿದ್ಯಾಪ್ರಸಾರಕ ಸಮಿತಿಗೆ ಉಪ ವಿಭಾಗಾಧಿಕಾರಿ, ಕಾರವಾರ, ಉಪ ವಿಭಾಗ ಇವರನ್ನು ಸಮಿತಿಯು ನಡೆಸುತ್ತಿರುವ ಚಿತ್ರಕಲಾ ಶಾಲೆಗೆ, ಸಮಿತಿಯ ಹಿತದೃಷ್ಟಿಯಿಂದ ಹಾಗೂ ಸಮಿತಿಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಆದೇಶದ ವಿರುದ್ಧ ಶ್ರೀ ಜಿ.ಕೆ. ಮಹಾಲೆ ಎಂಬುವವರು ಸಮಿತಿ ಪರವಾಗಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿ ರಿಟ್ ಸಂಖ್ಯೆ: 41816/2004 ರಲ್ಲಿ ಸರ್ಕಾರದ ಆದೇಶಕ್ಕೆ ತಡೆಯಾಜ್ಞೆ ಪಡೆದಿದ್ದು, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಈ ಪ್ರಕರಣದ ಬಗ್ಗೆ ದಿನಾಂಕ: 30.09.2005 ರಂದು ತೀರ್ಪು ನೀಡಿ ರಿಟ್ ಅರ್ಜಿಯನ್ನು ವಜಾಗೊಳಿಸಿದೆ. ಸರ್ಕಾರವು ನೇಮಿಸಿದ ಆಡಳಿತಾಧಿಕಾರಿಯ ಅವಧಿ ದಿನಾಂಕ: 31.03.2005ಕ್ಕೆ ಮುಕ್ತಾಯಗೊಂಡಿದ್ದು, ನ್ಯಾಯಾಲಯವು ರಿಟ್ ಅರ್ಜಿಯನ್ನು ವಜಾಗೊಳಿಸಿದ್ದರ ಹಿನ್ನೆಲೆಯಲ್ಲಿ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೊಸೊ 2004, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಮಿತಿಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 01.04.2005 ರಿಂದ 30.09.2005 ಹಾಗೂ 01.10.2005 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ವಿದ್ಯಾ ಪ್ರಸಾರಕ ಸಮಿತಿಗೆ ಚುನಾವಣೆ ನಡೆಸಿ ಚುನಾಯಿತಿ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 138 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕಯಂತ್ರ) ಹುದ್ದೆ ಸೃಜಿಸುವ ಕುರಿತು.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರ ಪತ್ರ ಸಂಖ್ಯೆ: ಸಿಬ್ಬಂದಿ 1-77/2004-05, ದಿನಾಂಕ: 3.3.2005.

2) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 649 ವೆಚ್ಚ-7/05, ದಿನಾಂಕ: 5.12.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 3.3.2005ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಕರ್ನಾಟಕ ರಾಜ್ಯದಲ್ಲಿನ ಎಲ್ಲಾ 202 ಉಪ ನೋಂದಣಿ ಕಛೇರಿ ಹಾಗೂ 31 ಜಿಲ್ಲಾ ನೋಂದಣಿ ಕಛೇರಿಗಳ ಕಾವೇರಿ ತಂತ್ರಾಂಶ ಹಾಗೂ ಗಣಕ ಯಂತ್ರಗಳ ನಿರ್ವಹಣೆಗಾಗಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕ ಯಂತ್ರ) ಹುದ್ದೆ ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಕುರಿತು ಆರ್ಥಿಕ ಇಲಾಖೆಯ ಅಭಿಪ್ರಾಯ ಕೋರಲಾಗಿ, ಆರ್ಥಿಕ ಇಲಾಖೆಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 5.12.2005ರ ಟಿಪ್ಪಣಿಯಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕೇಂದ್ರ ಕಛೇರಿಯಲ್ಲಿರುವ ಕೇಂದ್ರ ಸ್ಥಾನ ಸಹಾಯಕರು (ಆಡಿಟ್) ಹುದ್ದೆಯನ್ನು (ವೇತನ ಶ್ರೇಣಿ ರೂ.7400-13,120) 'ಗ್ರೂಪ್-ಎ' ಕಿರಿಯ ವೇತನ ಶ್ರೇಣಿ) ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮಾತ್ರ 'ಗ್ರೂಪ್-ಎ' ಹಿರಿಯ ವೇತನ ಶ್ರೇಣಿ ಹುದ್ದೆಗೆ (ರೂ.9580-14,200) ಮೇಲ್ದರ್ಜೆಗೇರಿಸಿ "ಸಹಾಯಕ ನೋಂದಣಿ ಮಹಾಪರಿವೀಕ್ಷಕರು" ಎಂದು ಮರುಪದನಾಮೀಕರಿಸಲು ಸಹಮತಿ ನೀಡಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 13 ಮುನೋಸೇ (1) 2005, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕೇಂದ್ರ ಕಛೇರಿಯಲ್ಲಿರುವ ಕೇಂದ್ರ ಸ್ಥಾನ ಸಹಾಯಕರು (ಆಡಿಟ್) ಹುದ್ದೆಯನ್ನು (ವೇತನ ಶ್ರೇಣಿ ರೂ.7400-13,120 'ಗ್ರೂಪ್-ಎ' ಕಿರಿಯ ವೇತನ ಶ್ರೇಣಿ) ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮಾತ್ರ 'ಗ್ರೂಪ್-ಎ' ಹಿರಿಯ ವೇತನ ಶ್ರೇಣಿ ಹುದ್ದೆಗೆ (ರೂ.9580-14,200) ಮೇಲ್ದರ್ಜೆಗೇರಿಸಿ "ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕಯಂತ್ರ)" ಎಂದು ಮರುಪದನಾಮೀಕರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎನ್. ಶ್ರೀಮುಖಿ**

ಪಿ.ಆರ್. 151 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಹಲವು ದಾಖಲೆಗಳನ್ನು ಕನ್ನಡದಿಂದ ಆಂಗ್ಲ ಭಾಷೆಗೆ ಭಾಷಾಂತರಿಸುವ ಬಗ್ಗೆ.

**ಓದಲಾಗಿದೆ:** ಸುತ್ತೋಲೆ ಸಂಖ್ಯೆ: ಕಂಇ 52 ಎಡಿಇ 2004, ದಿನಾಂಕ: 7.10.2005.

**ಪ್ರಸ್ತಾವನೆ:**

ಕಂದಾಯ ಇಲಾಖೆಯಲ್ಲಿನ ಕೆಲವು ದಾಖಲಾತಿ/ಕಡತಗಳನ್ನು ಕನ್ನಡದಿಂದ ಆಂಗ್ಲ ಭಾಷೆಗೆ ಭಾಷಾಂತರಿಸಲು ಆಸಕ್ತಿಯುಳ್ಳವರಿಂದ ಮೇಲೆ ಓದಲಾದ ಸುತ್ತೋಲೆಯಲ್ಲಿ ಸ್ವವಿವರಗಳೊಂದಿಗೆ ಕಂದಾಯ ಇಲಾಖೆಯನ್ನು ಪತ್ರ ಮುಖೇನ / ಸಂಪರ್ಕಿಸಲು ಕೋರಲಾಗಿತ್ತು. ಅದರಂತೆ ಆಸಕ್ತಿಯುಳ್ಳವರು ಭಾಷಾಂತರ ಕಾರ್ಯ ನಿರ್ವಹಿಸುವ ಬಗ್ಗೆ ಮಾಹಿತಿ ನೀಡಿರುತ್ತಾರೆ. ಸದರಿ ಮಾಹಿತಿಗಳನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ಭಾಷಾಂತರ ಕಾರ್ಯವನ್ನು ವಹಿಸಿಕೊಡಲು ನಿರ್ಧರಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 610 ಬಿಎಂಎಂ 2005, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡವರಿಗೆ ಭಾಷಾಂತರ ಕಾರ್ಯನಿರ್ವಹಿಸಲು ಈ ಕೆಳಕಂಡ ನಿಬಂಧನೆಗೊಳಪಟ್ಟು ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ನಿಗದಿಪಡಿಸಿದ ದರ ಪ್ರತಿ ಪುಟಕ್ಕೆ |
|---|---|---|
| 1 | ಸುಮನಾ ಬಾಳಿಗ ಎಂ.,<br>ನಂ.11, 1ನೇ ಮುಖ್ಯರಸ್ತೆ, 4ನೇ ಕ್ರಾಸ್, ನೇತಾಜಿ ನಗರ, ಹೆಬ್ಬಾಳ್ ಕೆಂಪಾಪುರ, ಬೆಂಗಳೂರು-24 | 35/- |
| 2 | ವಿ.ಎಸ್. ಭಕ್ರಿ,<br>ನ್ಯಾಯವಾದಿಗಳು,ನಂ.46/116, ರಾಯಲ್ ಬೇಕರಿ, ಪಿಡಬ್ಲ್ಯೂಡಿ ರಸ್ತೆ, ಆಕಾಶನಗರ,<br>ಬಿ. ನಾರಾಯಣಪುರ ಬಡಾವಣೆ, ದೂರವಾಣಿನಗರ, ಬೆಂಗಳೂರು-560016. | 35/- |
| 3 | ಕೆ.ಎಸ್. ಗೋಪಿನಾಥ್,<br>ನಂ.34, 17ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ ಮತ್ತು 4ನೇ ಮೇನ್ ರಸ್ತೆ ಮಧ್ಯೆ, ಮಲ್ಲೇಶ್ವರಂ ಪಶ್ಚಿಮ,<br>ಬೆಂಗಳೂರು-55. | 35/- |

ಭಾಷಾಂತರ ಕಾರ್ಯನಿರ್ವಹಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿದೆ.

1) ಈ ಕಾರ್ಯವನ್ನು ಗೌಪ್ಯವಾಗಿ ನಿರ್ವಹಿಸುವುದು.
2) ಭಾಷಾಂತರಕ್ಕಾಗಿ ಬಳಸುವ ಪದಗಳು ಕಾನೂನು ಶಬ್ದಕೋಶ, ಕಛೇರಿ ಕೈಪಿಡಿ ಹಾಗೂ ಕನ್ನಡ ಶಬ್ದಕೋಶದಲ್ಲಿನ ಪದಗಳಿಗೆ ಹೋಲಿಕೆಯಾಗಬೇಕು.
3) ಭಾಷಾಂತರ ಮಾಡಿದ ಕಡತಗಳನ್ನು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ಪರಿಶೋಧಿಸಿದ (Scrutiny) ಬಗ್ಗೆ ಪ್ರತಿಗಳನ್ನು ನೀಡುವುದು ಹಾಗೂ ಸಂಬಂಧಿಸಿದ Floppy/CD ಯನ್ನು ನೀಡುವುದು.
4) ಈ ಭಾಷಾಂತರ ಕಾರ್ಯವನ್ನು ಮುಗಿಸಿ ಸಲ್ಲಿಸಲು 10 ದಿನಗಳ ಅವಧಿಯನ್ನು ನಿಗದಿಪಡಿಸಲಾಗಿದೆ.
5) ಈ ಭಾಷಾಂತರ ಕಾರ್ಯಕ್ಕೆ ತಗಲುವ ವೆಚ್ಚವನ್ನು ಭಾಷಾಂತರ ಕಾರ್ಯ ಪೂರ್ಣಗೊಳಿಸಿ ಸರ್ಕಾರಕ್ಕೆ ಸಲ್ಲಿಸಿದ ನಂತರ ಸಂಭಾವನೆ ನೀಡಲು ಕ್ರಮ ಕೈಗೊಳ್ಳಲಾಗುವುದು.
6) ಭಾಷಾಂತರ ಕಾರ್ಯಕ್ಕೆ ನೀಡಿರುವ ಕಡತಗಳಲ್ಲಿ ಆಂಗ್ಲ ಭಾಷೆಯಲ್ಲಿರುವ ದಾಖಲೆಗಳನ್ನು ಹಾಗೂ X Mark ಮಾಡಿರುವ ಕನ್ನಡದ ದಾಖಲೆಗಳನ್ನು ಹೊರತುಪಡಿಸಿ ಉಳಿದ ದಾಖಲೆಗಳನ್ನು ಭಾಷಾಂತರಿಸುವುದು.
7) ಭಾಷಾಂತರಕಾರರ ಸುಪರ್ದಿಗೆ ನೀಡಿದ ದಾಖಲೆಗಳನ್ನು ಗೌಪ್ಯವಾಗಿಟ್ಟು, ಸರ್ಕಾರಕ್ಕೆ ಹಿಂತಿರುಗಿಸುವ ಜವಾಬ್ದಾರಿಯನ್ನು ವಹಿಸಲಾಗಿದೆ. ಯಾವುದೇ ದಾಖಲಾತಿಗಳು ನಾಶವಾದಲ್ಲಿ ಭಾಷಾಂತರಕಾರರನ್ನು ಸಂಪೂರ್ಣವಾಗಿ ಜವಾಬ್ದಾರರನ್ನಾಗಿ ಮಾಡಲಾಗುವುದು. ಅವರ ವಿರುದ್ಧ ಕಾನೂನಿನ ಕ್ರಮ ಜರುಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರಯ್ಯ**

ಪಿ.ಆರ್. 127 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು).

**ವಿಷಯ:** ಶ್ರೀಮತಿ ಕಮಲಾ ಬಸಲಿಂಗಪ್ಪ, ಬಾಳಿಪಡಿ, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕಛೇರಿ, ಗೋಕಾಕ್, ತಾಲ್ಲೂಕು, ಬೆಳಗಾಂ ಜಿಲ್ಲೆ ಇವರು ಎಸಗಿದ ಭ್ರಷ್ಟಾಚಾರ ಆರೋಪದ ಕುರಿತು ಇಲಾಖಾ ವಿಚಾರಣೆಗೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:**
1) ಸಹಾಯಕ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ ಇವರ ಅ.ಸ. ಪತ್ರ ಸಂಖ್ಯೆ: Compt/Uplok/BGM-19/2004/ARLO-4, ದಿನಾಂಕ: 09.12.2005.
2) ಗೌರವಾನ್ವಿತ ಉಪಲೋಕಾಯುಕ್ತರವರ ಶಿಫಾರಸ್ಸು ವರದಿ ಸಂಖ್ಯೆ: Compt/Uplok/BGM-19/2004/ARLO-4, ದಿನಾಂಕ: 29.11.2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತ ಕಛೇರಿಯ ಸಹಾಯಕ ನಿಬಂಧಕರ ಅರೆ ಸರ್ಕಾರಿ ಪತ್ರದೊಂದಿಗೆ ಅಡಕವಿಟ್ಟಿರುವ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಗೌರವಾನ್ವಿತ ಉಪಲೋಕಾಯುಕ್ತರವರ ವರದಿಯಂತೆ ಶ್ರೀಮತಿ ಕಮಲಾ ಬಸಲಿಂಗಪ್ಪ ಬಾಳಿಪಡಿ, ದ್ವಿತೀಯ ದರ್ಜೆ ಸಹಾಯಕರು ಇವರು ಗೋಕಾಕ್ ತಾಲ್ಲೂಕು ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವಾಗ ಇವರು ಶ್ರೀ ಸಿದ್ರಾಮಪ್ಪ ಯಲ್ಲಪ್ಪ ಕುರಿ ಸಾಕೀನ:ಖನಗಾಂವ ತಾಲ್ಲೂಕ ಗೋಕಾಕ್, ಇವರಿಂದ ಜಾತಿ ಪ್ರಮಾಣ ಪತ್ರ (2ಎ) ತಹಶೀಲ್ದಾರರಿಂದ ಸಹಿ ಮಾಡಿಸಿ ಕೊಡುವ ಸಲುವಾಗಿ ರೂ.400/- ಲಂಚ ಕೇಳಿ ಪಡೆಯುತ್ತಿರುವಾಗ ಲೋಕಾಯುಕ್ತ ಪೊಲೀಸರ ದಾಳಿಗೆ ಸಿಕ್ಕಿಬಿದ್ದ ಪ್ರಯುಕ್ತ, ಸದರಿ ನೌಕರರು ಎಸಗಿದ ಈ

ದುರ್ನಡತೆ ತನಿಖೆಯಿಂದ ಮೇಲ್ನೋಟಕ್ಕೆ ನಿಜವಿರುವುದಾಗಿ ಕಂಡುಬಂದಿರುವುದರಿಂದ ಕಠಿಣ ದಂಡನೆ ವಿಧಿಸಲು ಅಳವಡಿಸುವ ವಿಧಿವಿಧಾನಗಳ ಅನ್ವಯ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಹಾಗೂ ಸದರಿ ವಿಚಾರಣೆಯನ್ನು ಗೌರವಾನ್ವಿತ ಉಪಲೋಕಾಯುಕ್ತ ಇವರಿಗೆ ವಹಿಸಿಕೊಡುವಂತೆ ಗೌರವಾನ್ವಿತ ಉಪಲೋಕಾಯುಕ್ತರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಗೌರವಾನ್ವಿತ ಉಪಲೋಕಾಯುಕ್ತರವರ ವರದಿಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 587 ಎಂವಿಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಗೌರವಾನ್ವಿತ ಉಪ ಲೋಕಾಯುಕ್ತರವರು ಮಾಡಿರುವ ಶಿಫಾರಸ್ಸನ್ನು ಒಪ್ಪಿ ಶ್ರೀಮತಿ ಕಮಲಾ ಬಸಲಿಂಗಪ್ಪ ಬಾಳಿಪಡಿ, ತಾಲ್ಲೂಕು ಕಛೇರಿ, ಗೋಕಾಕ್, ಬೆಳಗಾಂ ಜಿಲ್ಲೆ ಇವರನ್ನು ಸಿಸಿಎ ನಿಯಮಾವಳಿ, ನಿಯಮ 11 ಮತ್ತು 11-ಎ ಅಡಿಯಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸಿ ಸದರಿ ವಿಚಾರಣೆಯನ್ನು ಇದೇ ನಿಯಮಾವಳಿಯ, ನಿಯಮ 14-ಎ ರನ್ವಯ ಗೌರವಾನ್ವಿತ ಉಪಲೋಕಾಯುಕ್ತರವರಿಗೆ ವಹಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರಯ್ಯ**

ಪಿ.ಆರ್. 136 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-1).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕೃತೋಇ 51 ಕೃವಿವಿ 2000, ಬೆಂಗಳೂರು, ದಿನಾಂಕ: 10ನೇ ಜನವರಿ 2006**

ಸರ್ಕಾರದ ಆದೇಶ ಸಂಖ್ಯೆ: ಕೃತೋಇ 51 ಕೃವಿವಿ 2000, ದಿನಾಂಕ: 26.7.2005ರ ಆದೇಶದ 2ನೇ ಷರತ್ತನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"The services rendered by the Research Assistant/Instructor/Extension Guide will be counted as qualifying service. Promotions will be given only after obtaining Masters degree."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 152 **ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## FOREST, ECOLOGY AND ENVIRONMENT SECRETARIAT

**CORRIGENDUM No. FEE 170 FLL 2005, Bangalore, Dated: 7th January 2006**

In the order portion of the Government Order No. FEE 114 FGL 89, dated: 24.1.2005 condition No.18 and 23 are hereby deleted.

By Order and in the name of the Governor of Karnataka,

**S.R. VATSALA**

P.R. 153 Under Secretary to Government
Forest, Ecology and Environment Department.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2005 ಡಿಸೆಂಬರ್ 15 ರಿಂದ 18ನೇ ತಾರೀಖಿನವರೆವಿಗೆ ನಡೆಯುವ ಪ್ರತಿಷ್ಠಿತ ವಿದ್ಯಾಸಂಸ್ಥೆಗಳ ಸಂಯುಕ್ತ ಸಮಾವೇಶಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಂಜೂರಾತಿ ಕೋರಿ.

**ಓದಲಾಗಿದೆ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ನಿರ್ದೇಶಕರ, ಪತ್ರ ಕ್ರಮಾಂಕ: ಡಿಎಎಂ:ಎಸಿಟಿ: 1:35/2005–06 ದಿನಾಂಕ: 7.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ನಿರ್ದೇಶಕರ ಪತ್ರದಲ್ಲಿ ಎಂ.ಹೆಚ್.ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ ಇವರು ಭಾರತದ ಪ್ರತಿಷ್ಠಿತ ವಿದ್ಯಾಸಂಸ್ಥೆಗಳ ಸಂಯುಕ್ತ ಸಮಾವೇಶವನ್ನು 2005 ಡಿಸೆಂಬರ್ 15 ರಿಂದ 18ನೇ ದಿನಾಂಕದವರೆವಿಗೆ ಆಯೋಜಿಸಿದ್ದು, ಈ ಸಂಬಂಧ ಈ ಸಮಾವೇಶಕ್ಕೆ ಸರ್ಕಾರದ ವತಿಯಿಂದ ವಸತಿ ಮತ್ತು ಇತರ ಸೌಕರ್ಯಗಳನ್ನು ಏರ್ಪಡಿಸುವ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಾಗಲೀ ಅಥವಾ ಆರ್ಥಿಕ ಸಹಾಯವನ್ನು ನೀಡುವ ಮೂಲಕ ಈ ಕಾರ್ಯಕ್ರಮಕ್ಕೆ ಆಯೋಜಕರಾಗಿ ಭಾಗವಹಿಸಲು ಕೋರಿರುವರೆಂದು ನಿರ್ದೇಶಕರು ತಿಳಿಸಿರುತ್ತಾರೆ. ಮುಂದುವರೆದು ಅವರು ಈ ಸಂದರ್ಭದಲ್ಲಿ ಕರ್ನಾಟಕ ಪುರಾತತ್ವಕ್ಕೆ ಸಂಬಂಧಿಸಿದ ಒಂದು ವಸ್ತು ಪ್ರದರ್ಶನವನ್ನು ಹಾಗೂ ಇಲಾಖೆಯ ಪ್ರಕಟಣೆಗಳ ಪ್ರದರ್ಶನವನ್ನು ಸಹ ಏರ್ಪಡಿಸುವಂತೆ ಎಂ.ಹೆಚ್.ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ ಇವರು ಕೋರಿರುವರೆಂದು ತಿಳಿಸಿರುತ್ತಾರೆ.

ಈ ಸಮಾವೇಶದಲ್ಲಿ ಭಾಗವಹಿಸಲು ಹಾಗೂ ಇಲಾಖೆಯ ಪ್ರಕಟಣೆಗಳ ಪ್ರದರ್ಶನ ಹಾಗೂ ಮಾರಾಟವನ್ನು ಏರ್ಪಡಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಇವರು ಇಚ್ಛಿಸಿರುತ್ತಾರೆ. ಅಲ್ಲದೆ ಸದರಿ ಕಾರ್ಯಕ್ರಮಕ್ಕೆ ರೂ.1.00 ಲಕ್ಷವನ್ನು ನಿರ್ದೇಶಕರು, ಎಂ.ಹೆಚ್.ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ ಇವರಿಗೆ ನೀಡಬಹುದಾಗಿದೆ ಎಂದು ತಿಳಿಸಿ, ಈ ವೆಚ್ಚವನ್ನು 2005–06ನೇ ಸಾಲಿನ ಲೆಕ್ಕ ಶೀರ್ಷಿಕೆ:2205–00–103–0–01 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಸಂಭವನೀಯ ಉಳಿತಾಯದಲ್ಲಿ ಭರಿಸಲಾಗುವುದೆಂದು ತಿಳಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 267 ಕೆಎಂಯು 2005 ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಎಂ.ಹೆಚ್.ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ, ಬೆಂಗಳೂರು, ಇವರು 2005 ಡಿಸೆಂಬರ್ 15 ರಿಂದ 18ನೇ ತಾರೀಖಿನವರೆವಿಗೆ ಆಯೋಜಿಸಿರುವ ಭಾರತದ ಪ್ರತಿಷ್ಠಿತ ವಿದ್ಯಾಸಂಸ್ಥೆಗಳ ಸಂಯುಕ್ತ ಸಮಾವೇಶಕ್ಕೆ ಕೆಳಕಂಡ

ಷರತ್ತುಗಳಿಗೊಳಪಟ್ಟು ನಿರ್ದೇಶಕರು, ಎಂ.ಹೆಚ್.ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ, ಬೆಂಗಳೂರು, ಇವರಿಗೆ ರೂ.1.00 ಲಕ್ಷವನ್ನು ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

(1) ಸರ್ಕಾರವು ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.

(2) ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಮತ್ತು ಮುಕ್ತಾಯ ದೃಢೀಕರಣ ಪತ್ರ ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ: 2205–00–103–0–01 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ 2005–06ನೇ ಸಾಲಿನ ಸಂಭವನೀಯ ಉಳಿತಾಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96ರಲ್ಲಿ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 71

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಡಾ॥ ಆರ್.ಗೋಪಾಲ್, ನಿರ್ದೇಶಕರು (ಪ್ರಭಾರ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಇವರಿಗೆ ಚೆನ್ನೈನಲ್ಲಿ ನಡೆಯಲಿರುವ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಸ್ಮಾರಕಗಳ ಸಂರಕ್ಷಣೆ ಕುರಿತ ಕಾರ್ಯಾಗಾರದಲ್ಲಿ ಭಾಗವಹಿಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಇವರ ಪತ್ರ ಕ್ರಮಾಂಕ: ಡಿಎಎಂಆರ್.ಜಿ:ಪ್ರವಾಸ: 2005–06 ದಿನಾಂಕ 15.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 15.12.2005ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ರವರು, ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ ಹಾಗೂ ನಿರ್ವಹಣೆ ಕುರಿತು ದಿನಾಂಕ 21.12.2005 ಮತ್ತು 22.12.2005ರಂದು ಚೆನ್ನೈನಲ್ಲಿ ಕಾರ್ಯಾಗಾರವನ್ನು ಏರ್ಪಡಿಸಿದ್ದು, ಸದರಿ ಕಾರ್ಯಾಗಾರದಲ್ಲಿ ಭಾಗವಹಿಸಲು ಭಾರತೀಯ ಪುರಾತತ್ವ ಸರ್ವೇಕ್ಷಣೆಯವರು ನಿರ್ದೇಶಕರನ್ನು ಆಹ್ವಾನಿಸಿದ್ದು, ಸದರಿ ಕಾರ್ಯಾಗಾರವನ್ನು ಇದೇ ಮೊದಲ ಬಾರಿಗೆ ಆಯೋಜಿಸಿದ್ದು, ಈ ಕಾರ್ಯಾಗಾರದಲ್ಲಿ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಸ್ಮಾರಕಗಳ ಸಂರಕ್ಷಣೆ ಬಗ್ಗೆ ವಿವರವಾಗಿ ಚರ್ಚಿಸಲಾಗುವುದರಿಂದ ಮತ್ತು ಪುರಾತತ್ವ ಹಾಗೂ ಸಂರಕ್ಷಣಾ ತಜ್ಞರುಗಳು ಇದರಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸುವುದರಿಂದ ಸದರಿ ಕಾರ್ಯಾಗಾರದಲ್ಲಿ ಪಾಲ್ಗೊಂಡು ಇಲಾಖೆಯನ್ನು ಪ್ರತಿನಿಧಿಸಲು ಸರ್ಕಾರದ ಅನುಮತಿಯನ್ನು ನೀಡುವಂತೆ ನಿರ್ದೇಶಕರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 285 ಕೆಎಂಯು 2005, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ದಿನಾಂಕ 21.12.2005 ಮತ್ತು 22.12.2005ರಂದು ಚೆನ್ನೈನಲ್ಲಿ ನಡೆಯಲಿರುವ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ ಹಾಗೂ ನಿರ್ವಹಣೆ ಕುರಿತ ಕಾರ್ಯಾಗಾರದಲ್ಲಿ ಭಾಗವಹಿಸಲು ಡಾ॥ ಆರ್.ಗೋಪಾಲ್, ನಿರ್ದೇಶಕರು (ಪ್ರಭಾರ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ರವರಿಗೆ ದಿನಾಂಕ 20.12.2005ರಂದು ಕೇಂದ್ರಸ್ಥಾನದಿಂದ ಪ್ರಯಾಣಿಸಿ ದಿನಾಂಕ 23.12.2005ರಂದು (ಉಭಯ ದಿನಗಳು ಸೇರಿ) ಕೇಂದ್ರಸ್ಥಾನಕ್ಕೆ ಹಿಂತಿರುಗಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96ರಲ್ಲಿ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 72

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಸುವರ್ಣ ಕರ್ನಾಟಕ ಯೋಜನೆಯಡಿ ಕರ್ನಾಟಕ ಟೂರಿಸಂ ಎಕ್ಸ್ ಪೋ– 2006 ಕಾರ್ಯಕ್ರಮಕ್ಕೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1) ದಿನಾಂಕ:19.5.2005ರಂದು ಪ್ರ.ಕಾ.ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

2) ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಕಡತ ಸಂ:ವಾಪ್ರಯು/318/ಪ್ರವಾಯೋ.05

**ಪ್ರಸ್ತಾವನೆ:**

ಸುವರ್ಣ ಕರ್ನಾಟಕ ವರ್ಷದ ಸವಿನೆನಪಿಗಾಗಿ 2006ರ ಮೇ ಜೂನ್ ತಿಂಗಳಲ್ಲಿ ಎಫ್.ಐ.ಸಿ.ಸಿ.ಐ.ಸಹಯೋಗದೊಂದಿಗೆ ಮೈಸೂರಿನಲ್ಲಿ ವಿಶೇಷವಾಗಿ ಪ್ರವಾಸಿ ಮೇಳವನ್ನು ಏರ್ಪಡಿಸಲು ಉದ್ದೇಶಿಸಿದ್ದು, ಸದರಿ ಮೂರು ದಿವಸಗಳ ಕಾಲ ನಡೆಯುವ "Karnataka TOurism Expo"ನಲ್ಲಿ ರಾಷ್ಟ್ರದ ಎಲ್ಲಾ ರಾಜ್ಯಗಳ ಪ್ರವಾಸೋದ್ಯಮ ಇಲಾಖೆ/ಟೂರ್ ಆಪರೇಟರ್ಸ್/ಟ್ರಾವೆಲ್ ಏಜೆನ್ಸಿ/ಏರ್‌ಲೈನ್ ಸಂಸ್ಥೆಗಳಿಗೆ ಮಳಿಗೆಗಳನ್ನು ತೆರೆದು ಭಾಗವಹಿಸಲು ಆಹ್ವಾನಿಸಲಾಗುವುದೆಂದು ತಿಳಿಸುತ್ತಾ, ಈ ಎಕ್ಸ್‌ಪೋಗೆ ಸುಮಾರು 80.00 'ಲಕ್ಷ ರೂ.ಗಳ ವೆಚ್ಚವಾಗಲಿದ್ದು, ಎಫ್.ಐ.ಸಿ.ಸಿ.ಐ. ಸಂಸ್ಥೆಗೆ ಸುಮಾರು 25 ಲಕ್ಷ ರೂ.ಗಳ ಮೂಲ ಧನವನ್ನು ಇಲಾಖೆಗೆ ನೀಡಬೇಕೆಂದು ತಿಳಿಸುತ್ತಾ, ಇದಲ್ಲದೆ 50 ಜನ ವಿದೇಶಿ ಬರಹಗಾರರು/ಟೂರ್ ಆಪರೇಟರ್ಸ್ ಗಳಿಗೆ ಮೈಸೂರಿನಲ್ಲಿ ಊಟ ಮತ್ತು ವಸತಿ ವ್ಯವಸ್ಥೆಯನ್ನು ಇಲಾಖೆ ಒದಗಿಸಬೇಕಾಗಿದ್ದು, ಅಲ್ಲದೆ ಸಮ್ಮೇಳನದಲ್ಲಿ ಭಾಗವಹಿಸುವ ಸುಮಾರು 350 ಜನಗಳಿಗೆ ಔತಣ ಕೂಟ ವ್ಯವಸ್ಥೆ ಹಾಗೂ ಒಂದು ದಿನ ಸಾಂಸ್ಕೃತಿಕ ಕಾರ್ಯಕ್ರಮವನ್ನು

ಏರ್ಪಡಿಸಬೇಕಾಗುತ್ತದೆಂದು ಹಾಗೂ ಉತ್ಸವದ ಬಗ್ಗೆ ರಾಷ್ಟ್ರೀಯ ಹಾಗೂ ರಾಜ್ಯ ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡಬೇಕಾಗುತ್ತದೆ, ಎಂದು ತಿಳಿಸಿ ಈ ಎಲ್ಲಾ ಕಾರ್ಯಕ್ರಮಗಳಿಗಾಗಿ ಈ ಮೇಳಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ರೂ. 25 ಲಕ್ಷಗಳ ಆರ್ಥಿಕ ನೆರವನ್ನು ಪಡೆಯಲು ಪ್ರವಾಸೋದ್ಯಮ ಇಲಾಖೆ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಮೇಳಕ್ಕೆ ರೂ. 25 ಲಕ್ಷಗಳ ಅನುದಾನವನ್ನು ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆಗೆ ಬಿಡುಗಡೆಗೊಳಿಸಲು ಓದಲಾದ (2)ರಲ್ಲಿ ವಾರ್ತಾ, ಪ್ರವಾಸೋದ್ಯಮ ಯುವಜನ ಸೇವಾ ಇಲಾಖೆಯು ಪ್ರಸ್ತಾವನೆ ಸಲ್ಲಿಸಿದೆ. ಸರ್ಕಾರ ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 197 ಕರಅ 2005, ಬೆಂಗಳೂರು ದಿನಾಂಕ: 2ನೇ ಜನವರಿ 2006**

ಮೇಲೆ ತಿಳಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ವರ್ಷದ ಸವಿನೆನಪಿಗಾಗಿ 2006ರ ಮೇ–ಜೂನ್ ತಿಂಗಳಿನಲ್ಲಿ FICCI ಸಹಯೋಗದೊಂದಿಗೆ ಮೈಸೂರಿನಲ್ಲಿ 3 ದಿನಗಳ ಕಾಲ ನಡೆಯುವ "Karnataka Tourism Expo" ಇದಕ್ಕೆ ರೂ. 25.00 ಲಕ್ಷ (ರೂ. ಇಪ್ಪತ್ತೈದು ಲಕ್ಷಗಳು ಮಾತ್ರ) ಗಳ ಅನುದಾನವನ್ನು ನಿರ್ದೇಶಕರು,ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಬಿಡುಗಡೆಗೊಳಿಸಿದೆ. ಸದರಿ ಹಣವನ್ನು ಬಿಡುಗಡೆಗೊಳಿಸಿಕೊಂಡು ನಂತರ ಈ ಹಣವನ್ನು ಚೆಕ್ ಮೂಲಕ ಆಯುಕ್ತರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗೊಳಪಟ್ಟು ಕೂಡಲೇ ವಿತರಿಸುವಂತೆ ಸಹ ಆದೇಶಿಸಲಾಗಿದೆ.

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.
2) ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3) ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಈ ಹಣವನ್ನು ಲೆಕ್ಕ ಶೀರ್ಷಿಕೆ 2205–00–102–4–09–059 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಸಂಖ್ಯೆ: ಎಫ್.ಡಿ.1 ಟಿಎಫ್‌ಪಿ 96, ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 87

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಟಿಪ್ಪುಸುಲ್ತಾನ್ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆಯನ್ನು ಮೈಸೂರಿನಲ್ಲಿ ಸ್ಥಾಪಿಸುವ ಬಗ್ಗೆ – ಅನುದಾನ ಬಿಡುಗಡೆ ಕುರಿತು

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 105 ಕೆಎಂಯು 2003 ದಿ: 31–3–2004

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರ ಪತ್ರ ಕ್ರಮಾಂಕ ಡಿಎಎಂ/ಸಂವಿ/ದ: ವ:ಮೈಸೂರು:ವಸಂ/ಕ/2005–06 ದಿನಾಂಕ 16–6–2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಮೈಸೂರಿನ ವಸ್ತು ಪ್ರದರ್ಶನದ ಆವರಣದಲ್ಲಿ ಕರ್ನಾಟಕ ಭೂಸೇನಾ ನಿಗಮ ನಿಯಮಿತ ಇವರ ವತಿಯಿಂದ ನಿರ್ಮಾಣವಾಗುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ಕಟ್ಟಡ ಕಾಮಗಾರಿಗೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರಿಗೆ ರೂ.65.00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ, ಮೈಸೂರಿನ ವಸ್ತು ಪ್ರದರ್ಶನದ ಪ್ರಾಧಿಕಾರದ ಆವರಣದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಕಟ್ಟಡ ನಿರ್ಮಾಣ ಕಾರ್ಯವು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಇವರ ವತಿಯಿಂದ ನಿರ್ಮಿಸಲಾಗುತ್ತಿದೆ. ಇಲಾಖೆಯ ಕಟ್ಟಡದ ಕಾಮಗಾರಿಯು ಪ್ರಗತಿಯಲ್ಲಿರುವುದರಿಂದ ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4202–04–800–1–01–139 ಪ್ರಧಾನ ಕಾಮಗಾರಿಗಳು (ಯೋಜನೆ) ಅಡಿಯಲ್ಲಿ ರೂ.25.00 ಲಕ್ಷವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತರವರಿಗೆ ಬಿಡುಗಡೆ ಮಾಡಲು ಮಂಜೂರಾತಿ ಆದೇಶವನ್ನು ನೀಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ಕೋರಿರುತ್ತಾರೆ. ಈ ಅನುದಾನವು ವಸ್ತು ಸಂಗ್ರಹಾಲಯ ಕಟ್ಟಡದ ಗ್ಯಾಲರಿಗಳ ಗ್ರಿಡ್ ಬೀಂಗೆ ತಗಲುವ ಹೆಚ್ಚುವರಿ ವೆಚ್ಚ ಹಾಗೂ ಸಂಗ್ರಹಾಲಯ ಕಟ್ಟಡದ ಒಳ ವಿದ್ಯುತ್ತೀಕರಣದ ಕಾಮಗಾರಿ ಹಾಗೂ ವಿದ್ಯುತ್ ಪರಿವರ್ತಿತ ಅಳವಡಿಸಲು ತಗಲುವ ಅಂದಾಜು ವೆಚ್ಚಗಳಿಗೆ ಸಂಬಂಧಿಸಿರುತ್ತದೆ ಎಂದು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ತಿಳಿಸಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ದಿ: 16–6–2005ರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 242 ಕೆಎಂಯು 2004 ಬೆಂಗಳೂರು, ದಿನಾಂಕ 27ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೈಸೂರು ನಗರದ ವಸ್ತುಪ್ರದರ್ಶನದ ಪ್ರಾಧಿಕಾರದ ಆವರಣದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಅಪೂರ್ಣಗೊಂಡಿರುವ ಕಟ್ಟಡವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತ ವತಿಯಿಂದ ಪೂರ್ಣಗೊಳಿಸಿ, ಟಿಪ್ಪುಸುಲ್ತಾನ್ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆ ಸ್ಥಾಪಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರಿಗೆ ರೂ.25.00ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷ ಮಾತ್ರ) ಆಡಳಿತಾತ್ಮಕ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–04–800–1–01–139 ಪ್ರಧಾನ ಕಾಮಗಾರಿ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10–7–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 93

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಶ್ರೀ.ಬಿ.ಎಂ.ಇದಿನಬ್ಬ, ಮಾನ್ಯ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು – ಇವರ ಪತ್ನಿಯವರ ವೈದ್ಯಕೀಯ ವೆಚ್ಚ ಮರು ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು–2 ರವರ ಪತ್ರ ಸಂಖ್ಯೆ: ಎಂ.ಡಿ. ಎನ್.ಡಿ.990/ 029–06, ದಿನಾಂಕ: 10.10.2005.

2) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು, ಇವರ ಪತ್ರ ಸಂ. ಕಅಪ್ರಾ/ಕಾ/7/2005–06, ದಿನಾಂಕ: 31.8.2005.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಕಾಣಿಸಿದ ಪತ್ರದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ, ಬೆಂಗಳೂರು, ಇವರು, ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು, ಇವರ ಧರ್ಮಪತ್ನಿ ಶ್ರೀಮತಿ. ಅಲಿಯಮ್ಮ ಇವರಿಗೆ ಕಾಲು ಮುರಿತಕ್ಕೆ ದಿನಾಂಕ: 22.06.2005 ರಿಂದ ದಿನಾಂಕ:02.07.2005ರ ವರೆಗೆ ತೇಜಸ್ವಿನಿ ಆಸ್ಪತ್ರೆ ಮತ್ತು ಎಸ್.ಎಸ್.ಐ.ಒ.ಟಿ, ಕದ್ರಿ ದೇವಸ್ಥಾನ, ಮಂಗಳೂರು ಇವರು ಚಿಕಿತ್ಸೆ ನೀಡಿದ್ದು, ಚಿಕಿತ್ಸೆಯ ಒಟ್ಟು ವೆಚ್ಚ ರೂ. 35,685/– ಗಳನ್ನು ಕರ್ನಾಟಕ ಸಚಿವರ ವೈದ್ಯಕೀಯ ಶುಶ್ರೂಷಾ ನಿಯಮಗಳ ನಿಯಮ 10ರ ಪ್ರಕಾರ, ನಿಯಮಗಳನ್ನು ಸಡಿಲಿಸಿ, ಮಂಜೂರಾತಿ ನೀಡಿ ಮರು ಪಾವತಿ ಮಾಡಲು ಸೂಕ್ತ ಆದೇಶ ಹೊರಡಿಸಲು ಕೋರಿ ಪ್ರಸ್ತಾವನೆಯನ್ನು ಅಗತ್ಯ ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (1)ರ ಪತ್ರದಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರು ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಅಧ್ಯಕ್ಷರ ಧರ್ಮಪತ್ನಿ ಇವರ ಚಿಕಿತ್ಸೆಯ ಒಟ್ಟು ವೆಚ್ಚದ ಹಣದಲ್ಲಿ ರೂ.14,208/– ಗಳನ್ನು ಮಾತ್ರ ಮರು ಪಾವತಿ ಮಾಡಲು ಅರ್ಹತೆ ಹೊಂದಿರುತ್ತಾರೆಂದು ತಮ್ಮ ಅಭಿಪ್ರಾಯ ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂ. ಸಂಕಇ 54 ಕೆಎಎಲ್ 2005, ಬೆಂಗಳೂರು, ದಿನಾಂಕ: 7ನೇ ಜನವರಿ 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರು ತಮ್ಮ ಧರ್ಮಪತ್ನಿ ಶ್ರೀಮತಿ. ಅಲಿಯಮ್ಮ ಇವರಿಗೆ ಕಾಲು ಮುರಿತಕ್ಕಾಗಿ ಮಂಗಳೂರಿನಲ್ಲಿರುವ ತೇಜಸ್ವಿನಿ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ವೆಚ್ಚ ಮಾಡಿದ ಒಟ್ಟು ಹಣದಲ್ಲಿ ರೂ.14,308/– (ಅಕ್ಷರದಲ್ಲಿ ಹದಿನಾಲ್ಕು ಸಾವಿರ ಮೂರುನೂರ ಎಂಟು ರೂಪಾಯಿಗಳು ಮಾತ್ರ) ಗಳನ್ನು ಕರ್ನಾಟಕ ಸರ್ಕಾರದ ವೈದ್ಯಕೀಯ ನಿಯಮಗಳು ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರದ ಅನ್ವಯ ಮಂಜೂರು ಮಾಡಿ ಮರು ಪಾವತಿ ಮಾಡಲು ಸರ್ಕಾರದ ಆದೇಶ ಹೊರಡಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)ಯು ಅನಧಿಕೃತ ಟಿಪ್ಪಣಿ ಸಂ: ಸಿ.ಆ.ಸು.ಇ 157 ಶಿಸನೇ 2005 ದಿನಾಂಕ:15.10.2005ರಲ್ಲಿ ಮತ್ತು ಆರ್ಥಿಕ ಇಲಾಖೆ (ವೆಚ್ಚ–5) ಯು ಅ.ಟಿ. ಸಂಖ್ಯೆ: ಆಇ 2231 ವೆಚ್ಚ 5/2005 ದಿನಾಂಕ: 19.12.2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 94

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಸಮಗ್ರ ಜನಪದ ಹಾಗೂ ಯಕ್ಷಗಾನ ಸಾಹಿತ್ಯ ಸಂಪುಟಗಳ ಪ್ರಕಟಣೆಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಸ.ಆ.ಸಂ. ಸಂಕಇ 30 ಕಪ್ರದ 2003 ದಿನಾಂಕ:10.2.2004

2) ನಿ.ಕಸನಿ.ಬೆ. ಇವರ ಪ.ಸಂ.ಕಸನಿ:48:ಪ್ರಕಟಣೆ:2002:ಭಾಗ–2; ದಿನಾಂಕ: 22–11–2005.

**ಪ್ರಸ್ತಾವನೆ:**

ಸಮಗ್ರ ಜನಪದ ಯಕ್ಷಗಾನ ಸಾಹಿತ್ಯ ಸಂಪುಟಗಳ ಪ್ರಕಟಣೆಗೆ ಓದಲಾದ (1)ರ ಆದೇಶದಲ್ಲಿ ಸಂಪಾದಕ ಮಂಡಳಿಯನ್ನು ರಚಿಸಲಾಗಿದೆ. ಈ ಯೋಜನೆಯು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಹಾಗೂ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಜಂಟಿ ಯೋಜನೆಯಾಗಿರುತ್ತದೆ. ಈ ಯೋಜನೆಯಡಿ ಮೊದಲ ಹಂತವಾಗಿ 21 ಸಂಪುಟಗಳನ್ನು ಮುದ್ರಣಕ್ಕೆ ನೀಡಲಾಗಿದ್ದು, ಮುದ್ರಣಕ್ಕೆ ನೀಡಿರುವ ಸಂಪುಟಗಳ ಸಂಪಾದಕರಿಗೆ ಕ್ಷೇತ್ರ ಕಾರ್ಯದ ವೆಚ್ಚ ಮತ್ತು ಸಂಪುಟವನ್ನು ಸಿದ್ಧಪಡಿಸಿಕೊಟ್ಟಿರುವ ಲೇಖಕರಿಗೆ ಗೌರವ ಸಂಭಾವನೆ, ಸಂಪುಟಗಳ ಪರಿಶೀಲನೆಗೆ, ಮುದ್ರಕರಿಗೆ ಹಾಗೂ ಸಂಪುಟ ಸಂಪಾದಕರಿಗೆ ನಿರ್ವಹಣಾ ವೆಚ್ಚ ನೀಡಬೇಕಾಗಿದ್ದು, ಈ ಸಾಲಿನ ಕ್ರಿಯಾ ಯೋಜನೆಯಲ್ಲಿ ಕಾದಿರಿಸಿರುವ ರೂ. 10.00 ಲಕ್ಷಗಳನ್ನು ಬಿಡುಗಡೆಗೊಳಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರು ಓದಲಾದ (2)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುವರು. ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 13 ಕಪ್ರದ 2005, ಬೆಂಗಳೂರು, ದಿನಾಂಕ: 10ನೇ ಜನವರಿ 2006**

ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಪ್ರಸಕ್ತ ಸಾಲಿನಲ್ಲಿ ಕ್ರಿಯಾ ಯೋಜನೆಯಲ್ಲಿ ಸಮಗ್ರ ಜನಪದ ಮತ್ತು ಯಕ್ಷಗಾನ ಸಾಹಿತ್ಯ ಸಂಪುಟಗಳ ಪ್ರಕಟಣೆಗೆ ಅವಕಾಶ ಮಾಡಿಕೊಂಡ ರೂ. 10.00 ಲಕ್ಷ (ರೂ. ಹತ್ತು ಲಕ್ಷಗಳು ಮಾತ್ರ) ಗಳನ್ನು ಅನುದಾನವಾಗಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರ ಮುಖಾಂತರ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿಗೆ ಈ ಕೆಳಕಂಡ ಷರತ್ತುಗೊಳಪಟ್ಟು ಬಿಡುಗಡೆಗೊಳಿಸಲಾಗಿದೆ.

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.
2) ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.

3) ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.

4) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಯೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205–00–102–1–01–051 ಜನಪ್ರಿಯ ಸಾಹಿತ್ಯ ಪ್ರಕಾಶನ (ಯೋಜನೇತರ)ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿ: 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 95 **ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಶ್ರೀ ಎಸ್.ವಿ. ಗಣೇಶ್, ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಇವರಿಗೆ ಚೆನ್ನೈನಲ್ಲಿ ನಡೆಯಲಿರುವ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಸ್ಮಾರಕಗಳ ಸಂರಕ್ಷಣೆ ಕುರಿತ ಕಾರ್ಯಾಗಾರದಲ್ಲಿ ಭಾಗವಹಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ರವರ ಪತ್ರ ಕ್ರಮಾಂಕ: ಹವಿಪಪ್ರನಿಪ್ರಾ: ಹೊ:2005-06/613, ದಿನಾಂಕ: 12.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 12.12.2005ರ ಪತ್ರದಲ್ಲಿ ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ರವರು, ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ ಹಾಗೂ ನಿರ್ವಹಣೆ ಕುರಿತು ದಿನಾಂಕ: 21.12.2005 ಮತ್ತು 22.12.2005 ರಂದು ಚೆನ್ನೈನಲ್ಲಿ ಕಾರ್ಯಾಗಾರವನ್ನು ಏರ್ಪಡಿಸಿದ್ದು, ಸದರಿ ಕಾರ್ಯಾಗಾರದಲ್ಲಿ ಭಾಗವಹಿಸಲು ಭಾರತೀಯ ಪುರಾತತ್ವ ಸರ್ವೇಕ್ಷಣೆಯವರು ಆಯುಕ್ತರನ್ನು ಆಹ್ವಾನಿಸಿದ್ದು, ಸದರಿ ಕಾರ್ಯಾಗಾರವನ್ನು ಇದೇ ಮೊದಲ ಬಾರಿಗೆ ಆಯೋಜಿಸಿದ್ದು, ಈ ಕಾರ್ಯಾಗಾರದಲ್ಲಿ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಸ್ಮಾರಕಗಳ ಸಂರಕ್ಷಣೆ ಬಗ್ಗೆ ವಿವರವಾಗಿ ಚರ್ಚಿಸಲಾಗುವುದರಿಂದ ಮತ್ತು ಪುರಾತತ್ವ ಹಾಗೂ ಸಂರಕ್ಷಣಾ ತಜ್ಞರುಗಳು ಇದರಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸುವುದರಿಂದ ಸದರಿ ಕಾರ್ಯಾಗಾರದಲ್ಲಿ ಭಾಗವಹಿಸಲು ಸರ್ಕಾರದ ಅನುಮತಿಯನ್ನು ನೀಡುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಂಕಇ 286 ಕೆಎಂಯು 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ದಿನಾಂಕ: 21.12.2005 ಮತ್ತು 22.12.2005 ರಂದು ಚೆನ್ನೈನಲ್ಲಿ ನಡೆಯಲಿರುವ ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ ಹಾಗೂ ನಿರ್ವಹಣೆ ಕುರಿತ ಕಾರ್ಯಾಗಾರದಲ್ಲಿ ಭಾಗವಹಿಸಲು ಶ್ರೀ ಎಸ್.ವಿ.ಗಣೇಶ್, ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ರವರಿಗೆ ದಿನಾಂಕ: 20.12.2005 ರಂದು ಕೇಂದ್ರಸ್ಥಾನದಿಂದ ಪ್ರಯಾಣಿಸಿ ಕಾರ್ಯಾಗಾರದಲ್ಲಿ ಭಾಗವಹಿಸಿ ದಿನಾಂಕ: 23.12.2005 ರಂದು (ಉಭಯ ದಿನಗಳು ಸೇರಿ) ಹಿಂತಿರುಗಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 73 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನ ಸಂಪಿಗೆ ಗ್ರಾಮದಲ್ಲಿ ಶ್ರೀ ಬಿ.ಎಂ. ಶ್ರೀ ಸ್ಮಾರಕ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯರವರ ಪತ್ರ ಸಂಖ್ಯೆ: 22/ಸ್ಮಾರಕ/2001-02, ದಿನಾಂಕ: 19.12.2005.

**ಪ್ರಸ್ತಾವನೆ:**

ಮೇಲೆ ಓದಲಾದ 1ರ ಪತ್ರದಲ್ಲಿ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಅದರಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಸಂಪಿಗೆ ಗ್ರಾಮದಲ್ಲಿ ಬಿ.ಎಂ.ಶ್ರೀ ಸ್ಮಾರಕ ನಿರ್ಮಾಣಕ್ಕೆ ರೂ.13.00 ಲಕ್ಷಗಳ ಅಂದಾಜು ಪಟ್ಟಿ ಹಾಗೂ ನೀಲಿ ನಕಾಶೆ ಸಲ್ಲಿಸಿ ರೂ.10.00 ಲಕ್ಷಗಳ ಅನುದಾನವನ್ನು ಕೋರಿದ್ದಾರೆಂದು ತಿಳಿಸುತ್ತಾ, ಈ ವಿಷಯವು ನ್ಯಾಯಾಲಯದಲ್ಲಿ ಇರುವುದರಿಂದ ಹಾಗೂ ಸಾರ್ವಜನಿಕರಿಂದ ಒತ್ತಡವಿರುವ ಕಾರಣ 1997 ರಲ್ಲಿ ಕುಟುಂಬದವರು ಮನೆಯನ್ನು ನೀಡಿದ್ದರೂ ಸಹ ಯಾವುದೇ ಅಭಿವೃದ್ಧಿಯನ್ನು ಮಾಡಿಲ್ಲವಾದ ಕಾರಣ ಸುವರ್ಣ ಕರ್ನಾಟಕದ ಈ ವರ್ಷದಲ್ಲಿಯಾದರೂ ಸಾಹಿತ್ಯದ ಹರಿಕಾರರೆಂದೇ ಪ್ರಸಿದ್ಧರಾದ ಬಿ.ಎಂ.ಶ್ರೀ. ಇವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಿಸುವುದರ ಅಗತ್ಯ ಇದೆಯೆಂದು ವರದಿ ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಂಕಇ 196 ಕರಅ 2005, ಬೆಂಗಳೂರು, ದಿನಾಂಕ: 7ನೇ ಜನವರಿ 2006

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು ಸಂಪಿಗೆ ಗ್ರಾಮದಲ್ಲಿ ಬಿ.ಎಂ.ಶ್ರೀ. ಸ್ಮಾರಕ ನಿರ್ಮಾಣಕ್ಕಾಗಿ ರೂ.10.00 ಲಕ್ಷ (ರೂ. ಹತ್ತು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ತುಮಕೂರು ಇವರಿಗೆ ಬಿಡುಗಡೆ ಮಾಡಲು ಆದೇಶಿಸಲಾಗಿದೆ. ಈ ಮೊತ್ತವನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಲೆಕ್ಕ ಶೀರ್ಷಿಕೆ 2205-00-102-4-9-059 (ಯೋಜನೆ) ಅಡಿ ಭರಿಸಿ ಮೊತ್ತವನ್ನು ಕೂಡಲೇ ಡ್ರಾ ಮಾಡಿ ಚೆಕ್ಕನ್ನು ತುಮಕೂರು ಜಿಲ್ಲಾಧಿಕಾರಿಯವರಿಗೆ ಕಳುಹಿಸಿ ಕೊಡಲು ಸೂಚಿಸಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.

2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್. 86

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ.

**ಓದಲಾಗಿದೆ:** 1) ಜೀತಪದ್ಧತಿ/ಬಾಲಕಾರ್ಮಿಕ ವಿಷಯ ಕುರಿತು ದಿನಾಂಕ: 9-10 ಅಕ್ಟೋಬರ್ 2003 ರಂದು ಬೆಂಗಳೂರಿನ ಭಾರತೀಯ ವಿಶ್ವವಿದ್ಯಾಲಯದ ರಾಷ್ಟ್ರೀಯ ಕಾನೂನು ಶಾಖೆಯಲ್ಲಿ ನಡೆದ 2 ದಿನಗಳ ಕಾರ್ಯಾಗಾರದ ಶಿಫಾರಸ್ಸುಗಳು.
2) ದಿನಾಂಕ: 12.7.2004 ರಂದು ನಡೆದ ರಾಜ್ಯದ ಉನ್ನತ ಅಧಿಕಾರದ ಸಮಿತಿಯ ಸಭೆ ನಡವಳಿ.

**ಪ್ರಸ್ತಾವನೆ:**

1. ದಿನಾಂಕ: 9-10 ಅಕ್ಟೋಬರ್ 2003 ರಂದು ಬೆಂಗಳೂರಿನಲ್ಲಿ ನಡೆದ ಕಾರ್ಯಾಗಾರದಲ್ಲಿ "ಜೀತವಿಮುಕ್ತರುಗಳಿಗೆ ಪುನರ್ವಸತಿ ಸೌಲಭ್ಯವನ್ನು ಒದಗಿಸುವ ಕಾರ್ಯವು ಇನ್ನು ರೂಪುಗೊಳ್ಳುತ್ತಿರುವ ಸಮಯದಲ್ಲಿ ಅವರುಗಳು ಹೊಸ ಸಾಲಗಳಿಗೆ ಮತ್ತೆ ಮಾರುಹೋಗದಂತೆ ತಡೆಯುವ ಸಲುವಾಗಿ ರಾಜ್ಯ ಸರ್ಕಾರವು ಜೀತವಿಮುಕ್ತರುಗಳಿಗೆ ಪಿಂಚಣಿ ನೀಡಲು ಒಂದು ಯೋಜನೆಯನ್ನು ಸಿದ್ಧಪಡಿಸಬೇಕೆಂದು" ಶಿಫಾರಸ್ಸಾಗಿರುತ್ತೆ.

2. ಕಾರಣ ಜೀತಕ್ಕೆ ಒಳಗಾದವರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಸರ್ಕಾರವು ಮಾನವೀಯ ದೃಷ್ಟಿಯಿಂದ ಹಾಗೂ ತತ್‌ಕ್ಷಣದಿಂದ ಮಾಹೆಯಾನ ರೂ.300/- ಗಳನ್ನು ಸಹಾಯಧನ ರೂಪದಲ್ಲಿ ಎರಡು ವರ್ಷಗಳ ಕಾಲ ಒದಗಿಸುವ ಸಲುವಾಗಿ ರಾಜ್ಯ ಸರ್ಕಾರವು 2005-06ನೇ ಸಾಲಿನಿಂದ "ಜೀತವಿಮುಕ್ತರ ಪುನರ್ವಸತಿ ಸಹಾಯಧನ" ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಸಚಿವ ಸಂಪುಟವು ದಿನಾಂಕ: 08.12.2005 ರಂದು ಅನುಮೋದನೆಯನ್ನು ನೀಡಿದೆ. ಅದಕ್ಕಾಗಿ ಈ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 15 ಆರ್‌ಬಿಎಲ್ 2004, ಬೆಂಗಳೂರು, ದಿನಾಂಕ: 21ನೇ ಜನವರಿ 2006

ಜೀತವಿಮುಕ್ತರ ಪುನರ್ವಸತಿಗೆ ಸಂಬಂಧಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿದ ನಂತರ ಜೀತ ಪದ್ಧತಿಯಿಂದ ಬಿಡುಗಡೆಗೊಳಿಸಿದ ಜೀತವಿಮುಕ್ತರುಗಳಿಗೆ ಜೀತಪದ್ಧತಿಯಿಂದ ಬಿಡುಗಡೆಗೊಂಡ ದಿನದಿಂದ ಮೊದಲ 2 ವರ್ಷಗಳು ಅಂದರೆ 24 ತಿಂಗಳುಗಳ ಅವಧಿಗೆ ಮಾತ್ರ ಮಾಹೆಯಾನ ರೂ.300/- ಗಳನ್ನು (ಮೂರು ನೂರು ರೂಪಾಯಿಗಳು) ಸಹಾಯಧನ ರೂಪದಲ್ಲಿ ಪಾವತಿ ಮಾಡಲು "ಜೀತವಿಮುಕ್ತರ ಪುನರ್ವಸತಿ ಸಹಾಯಧನ" ಎಂಬ ಹೊಸ ಯೋಜನೆಯನ್ನು 2005-06ನೇ ಸಾಲಿನಿಂದ ಈ ಕೆಳಕಂಡ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ.

i) ಜೀತಪದ್ಧತಿಯಿಂದ ಬಿಡುಗಡೆಗೊಳ್ಳುವ ರಾಜ್ಯದ ಜೀತದಾಳುಗಳಿಗೆ ಮಾತ್ರ ಈ ಯೋಜನೆ ಅನ್ವಯಿಸತಕ್ಕದ್ದು.

ii) ಯಾವುದೇ ಮಾಧ್ಯಮದ ಮುಖಾಂತರ ಜೀತದಾಳುಗಳ ಬಗ್ಗೆ ಮಾಹಿತಿ ಬಂದ ಕೂಡಲೇ ಸಂಬಂಧಪಟ್ಟ ಜಿಲ್ಲಾಧಿಕಾರಿ/ಉಪ ವಿಭಾಗಾಧಿಕಾರಿಯು 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಅನ್ವಯ ತನಿಖೆ ನಡೆಸಿ, ಗರಿಷ್ಠ ಒಂದು ತಿಂಗಳ ಅವಧಿಯೊಳಗೆ ಅವರುಗಳನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸತಕ್ಕದ್ದು.

iii) ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನವೇ ಜೀತವಿಮುಕ್ತರುಗಳಿಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗ/ಉಪ ವಿಭಾಗಾಧಿಕಾರಿಯು ಜೀತವಿಮುಕ್ತ ಪ್ರಮಾಣ ಪತ್ರವನ್ನು ನೀಡತಕ್ಕದ್ದು ಹಾಗೂ ಮಾಹಿತಿಯನ್ನು ಆ ದಿನವೇ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಮತ್ತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಇವರಿಗೆ ಕಳುಹಿಸತಕ್ಕದ್ದು.

iv) ಜಿಲ್ಲಾಧಿಕಾರಿಗಳ/ಉಪ ವಿಭಾಗಾಧಿಕಾರಿಗಳ ವರದಿ ಆಧಾರದ ಮೇಲೆ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಪ್ರತಿ ಆರ್ಥಿಕ ವರ್ಷದಲ್ಲಿ ಎರಡು ಬಾರಿಯಂತೆ ಎರಡು ವರ್ಷಗಳ ಕಾಲ ಪ್ರತಿ ಜೀತವಿಮುಕ್ತನಿಗೆ ಮಾಹೆಯಾನ ರೂ.300/-ರ ದರದಲ್ಲಿ ಬಿಡುಗಡೆ ಮಾಡಲಾಗುವ ಈ ಸಹಾಯಧನವನ್ನು ಕೂಡಲೇ ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಸಂಪೂರ್ಣವಾಗಿ ಮರುಬಿಡುಗಡೆ ಮಾಡತಕ್ಕದ್ದು.

v) ಸಂಬಂಧಪಟ್ಟ ಗ್ರಾಮ ಪಂಚಾಯತಿ ಅಧ್ಯಕ್ಷರು ಮತ್ತು ಕಾರ್ಯದರ್ಶಿ ಅಂತಹ ಜೀತವಿಮುಕ್ತ ಪ್ರಮಾಣಪತ್ರದ ಆಧಾರದ ಮೇಲೆ ಆಯಾ ಜೀತವಿಮುಕ್ತರುಗಳಿಗೆ ಒಂದು ವಾರದೊಳಗೆ ಭಾವಚಿತ್ರ ಸಹಿತ ಗುರುತಿನ ಚೀಟಿಯನ್ನು ನೀಡತಕ್ಕದ್ದು ಹಾಗೂ ಗ್ರಾಮ ಪಂಚಾಯತಿಗೆ ಮೇಲ್ಕಂಡಂತೆ ಮರುಬಿಡುಗಡೆಯಾಗುವ ಸದರಿ ಪುನರ್ವಸತಿ ಸಹಾಯಧನವನ್ನು ಆ ಗ್ರಾಮ ಪಂಚಾಯತಿ ಖಾತೆಯಿರುವ ಬ್ಯಾಂಕಿನಲ್ಲಿ ಪ್ರತ್ಯೇಕ ಉಳಿತಾಯ ಖಾತೆ ತೆರೆದು ಆ ಖಾತೆಗೆ ಜಮಾ ಮಾಡತಕ್ಕದ್ದು.

vi) ಹಾಗೆ ಬ್ಯಾಂಕಿಗೆ ಜಮಾ ಮಾಡಲಾದ ಪುನರ್ವಸತಿ ಸಹಾಯಧನದ ಒಟ್ಟು ಮೊತ್ತದ ಪೈಕಿ ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಆ ಗ್ರಾಮ ಪಂಚಾಯತಿ ವ್ಯಾಪ್ತಿಗೆ ಬರುವ ಪ್ರತಿ ಜೀತವಿಮುಕ್ತರ ಆತನು/ಆಕೆಯ ಹಾಲಿ ಹೊಂದಿರುವ ಬ್ಯಾಂಕ್ ಉಳಿತಾಯ ಖಾತೆಗೆ ಅಥವಾ ಹೊಸದಾಗಿ ಗ್ರಾಮ ಪಂಚಾಯತಿ ಖಾತೆ ಇರುವ ಬ್ಯಾಂಕ್ ಬ್ರ್ಯಾಂಚಿನಲ್ಲಿ ಖಾತೆ ತೆರೆಸುವ ಮೂಲಕ ಪ್ರತಿ ಮಾಹೆ ರೂ.300/- ರಂತೆ ಆ ಖಾತೆಗೆ ಜಮೆ ಮಾಡತಕ್ಕದ್ದು.

vii) ಒಂದು ವೇಳೆ ಈ ಎರಡು ವರ್ಷದ ಅವಧಿಯಲ್ಲಿ ಪುನರ್ವಸತಿ ಸಹಾಯಧನ ಸ್ವೀಕರಿಸುತ್ತಿರುವ ಜೀತವಿಮುಕ್ತನು/ಳು ಮೃತಪಟ್ಟಲ್ಲಿ, ತಾಲ್ಲೂಕು ತಹಸೀಲ್ದಾರ್ ರವರಿಂದ ನೀಡಲ್ಪಡುವ ದೃಢೀಕೃತ ಮರಣ ಸಮರ್ಥನಾ ಪತ್ರ ಹಾಗೂ ಕುಟುಂಬ ವಾರಸುದಾರರ ಪ್ರಮಾಣಪತ್ರಗಳ ಆಧಾರದ ಮೇಲೆ ಆತನ/ಆಕೆಯ ಕುಟುಂಬದ ಹಿರಿಯ ಸದಸ್ಯರಿಗೆ ಉಳಿದ ಅವಧಿಗೆ ಮಾತ್ರ ಮಂಜೂರು ಮಾಡಿ, ಪಾವತಿಸತಕ್ಕದ್ದು.

viii) ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230-ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-198-ಗ್ರಾಮ ಪಂಚಾಯತಿಗಳಿಗೆ ಸಹಾಯ-1-ಗ್ರಾಮ ಪಂಚಾಯತಿಗಳು-01-ಬ್ಲಾಕ್ ಅನುದಾನ (ಜೀತದಾಳುಗಳ ಪುನರ್ವಸತಿ) (ಯೋಜನೆ)ಗೆ ಜಮಾ ಮಾಡತಕ್ಕದ್ದು.

ix) ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಆಇ.1492.ವೆಚ್ಚ-6/ 2004 ದಿನಾಂಕ: 7.11.2005 ಹಾಗೂ ಗ್ರಾ.ಅ.ಪಂ.ರಾ. ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ.543.ಪಿಬಿಎಸ್.05, ದಿನಾಂಕ: 27.12.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೀ.ಪ. ಬಳಿಗಾರ**

ಪಿ.ಆರ್. 252

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** 1986 ಮತ್ತು 1996 ಯು.ಜಿ.ಸಿ. ಪರಿಷ್ಕೃತ ವೇತನ ಶ್ರೇಣಿಯನ್ನು ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾಲಯದ ಲೈಬ್ರೇರಿಯನ್ ಡೆಪ್ಯುಟಿ ಲೈಬ್ರರೀಯನ್, ಅಸಿಸ್ಟೆಂಟ್ ಲೈಬ್ರರೀಯನ್ ಹಾಗೂ ಡಾಕ್ಯುಮೆಂಟಲಿಸ್ಟ್ ಹುದ್ದೆಗಳಿಗೆ ವಿಸ್ತರಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಕೃಷಿ ವಿಶ್ವವಿದ್ಯಾಲಯ ಧಾರವಾಡ ಇವರ ಪತ್ರ ಸಂಖ್ಯೆ: ಕುಸ:ನೇವಿ:2001-38-ಸಿ, ದಿನಾಂಕ: 3.4.2001 ಮತ್ತು 4.9.2001.

2) ಕೃಷಿ ವಿಶ್ವವಿದ್ಯಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಹನಿಅ:ಸಿ:ಡಿಸಿ:ಬಿಆರ್:ಯುಜಿಸಿ:Lib:96:2000-2001, ದಿನಾಂಖ: 28.3.2001 ಮತ್ತು ಪತ್ರ ಸಂಖ್ಯೆ: ಎಇ:ಇಎಸ್‌ಟಿ:ವಿ.(2)67:87:2005-06, ದಿನಾಂಕ: 3.8.2005.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಕುಲಸಚಿವರು ಕೃಷಿ ವಿಶ್ವವಿದ್ಯಾಲಯ ಧಾರವಾಡ ಮತ್ತು ಬೆಂಗಳೂರುರವರು ಸರ್ಕಾರದ ಆದೇಶ ಸಂಖ್ಯೆ: ಕೃತೋಇ 83 ಕೃವಿವಿ 1987 ದಿನಾಂಕ: 31.5.1988 ಮತ್ತು ಸರ್ಕಾರದ ಆದೇಶ ಸಂಖ್ಯೆ: ಕೃತೋಇ 177 ಕೃವಿವಿ 1988 ದಿನಾಂಕ: 28.7.1989 ರನ್ವಯ 1986ರ ಯುಜಿಸಿ ಪರಿಷ್ಕೃತ ವೇತನ ಶ್ರೇಣಿಯನ್ನು ಕೃಷಿ ವಿಶ್ವವಿದ್ಯಾಲಯದ ಬೋಧಕ ವರ್ಗದವರಿಗೆ ವಿಸ್ತರಿಸಲಾಗಿದೆ. ಸರ್ಕಾರದ ಆದೇಶದ ಸಂಖ್ಯೆ: ಇಡಿ 176 ಯುಎನ್‌ಐ 85, ದಿನಾಂಕ: 30.3.1990 ರಲ್ಲಿ ಶಿಕ್ಷಣ ಇಲಾಖೆಯು ತನ್ನ ಅಧೀನದಲ್ಲಿ ಬರುವ ವಿಶ್ವವಿದ್ಯಾಲಯಗಳಲ್ಲಿನ ಗ್ರಂಥಪಾಲರಿಗೆ ಹಾಗೂ ದೈಹಿಕ ಶಿಕ್ಷಕರಿಗೆ 1986ರ ಪರಿಷ್ಕೃತ ಯುಜಿಸಿ ವೇತನವನ್ನು ನೀಡಲಾಗಿದೆ. ಆದರಂತೆ ಐಸಿಎಆರ್ ಮಾರ್ಗಸೂಚಿಯಲ್ಲಿ ಸೂಚಿಸಿದಂತೆ ಗ್ರಂಥಾಲಯ ಸಿಬ್ಬಂದಿಗೆ ಯುಜಿಸಿ ವೇತನ ಶ್ರೇಣಿಯನ್ನು ವಿಸ್ತರಿಸಲು ಕೋರಿರುತ್ತಾರೆ. ಧಾರವಾಡ ಕೃಷಿ ವಿಶ್ವವಿದ್ಯಾಲಯವು 1986 ಮತ್ತು 1996ರ ಯುಜಿಸಿ : ಐಸಿಎಆರ್ ವೇತನ ಶ್ರೇಣಿಯನ್ನು ಗ್ರಂಥಾಧಿಕಾರಿ ಮತ್ತು ಗ್ರಂಥಾಲಯದ ಸಿಬ್ಬಂದಿಗೆ ಈಗಾಗಲೇ ಆಡಳಿತ ಮಂಡಳಿಯ ಅನುಮೋದನೆ ಪಡೆದು ವಿಸ್ತರಿಸಿಕೊಂಡಿದ್ದು, ಇದಕ್ಕೆ ಸರ್ಕಾರದ : ಆರ್ಥಿಕ ಅನುಮೋದನೆ ಪಡೆದಿರುವುದಿಲ್ಲ. ಬೆಂಗಳೂರು ಕೃಷಿ ವಿಶ್ವವಿದ್ಯಾಲಯವು ಸಹ 1986ರ ಯುಜಿಸಿ : ಐಸಿಎಆರ್ ವೇತನ ಶ್ರೇಣಿಯನ್ನು ಡೆಪ್ಯುಟಿ ಲೈಬ್ರರೀಯನ್, ಅಸಿಸ್ಟೆಂಟ್ ಲೈಬ್ರರೀಯನ್ ಹಾಗೂ ಡಾಕ್ಯುಮೆಂಟಲಿಸ್ಟ್ (ಹಿರಿಯ ವೇತನ ಶ್ರೇಣಿ) ಮತ್ತು ಸಹಾಯಕ ಗ್ರಂಥಪಾಲಕ : ಡಾಕ್ಯುಮೆಂಟಲಿಸ್ಟ್ ಇವರುಗಳಿಗೆ ವಿಸ್ತರಿಸಿಕೊಂಡಿದ್ದು, ಇವರಿಗೆ ಬಾಕಿಯನ್ನು ಸಹ ವಿತರಿಸಿರುವುದಾಗಿ ತಿಳಿಸಲಾಗಿದೆ.

ಸರ್ಕಾರವು ಈ ವಿಷಯವನ್ನು ಪರಿಶೀಲಿಸಿ, ಗ್ರಂಥಪಾಲಕರ ವೃಂದದ ಇತರೆ ಹುದ್ದೆಗಳಾದ ಡೆಪ್ಯುಟಿ ಲೈಬ್ರರೀಯನ್, ಅಸಿಸ್ಟೆಂಟ್ ಲೈಬ್ರರೀಯನ್ ಹಾಗೂ ಡಾಕ್ಯುಮೆಂಟಲಿಸ್ಟ್ (ಹಿರಿಯ ವೇತನ ಶ್ರೇಣಿ) ಮತ್ತು ಸಹಾಯಕ ಗ್ರಂಥಪಾಲಕ ಡಾಕ್ಯುಮೆಂಟಲಿಸ್ಟ್ ಸಿಬ್ಬಂದಿ ಇವರುಗಳಿಗೆ 1986 ಹಾಗೂ 1996 ಯುಜಿಸಿ:ಐಸಿಎಆರ್ ವೇತನ ಶ್ರೇಣಿಯನ್ನು ವಿಸ್ತರಿಸಿದ ಕ್ರಮಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡಲು ತೀರ್ಮಾನಿಸಿದೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 73 ಕೃವಿವಿ 2001, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ಗ್ರಂಥಪಾಲಕರ ವೃಂದದ ಇತರೆ ಹುದ್ದೆಗಳಾದ ಡೆಪ್ಯುಟಿ ಲೈಬ್ರರೀಯನ್, ಅಸಿಸ್ಟೆಂಟ್ ಲೈಬ್ರರೀಯನ್ ಹಾಗೂ ಡಾಕ್ಯುಮೆಂಟಲಿಸ್ಟ್ (ಹಿರಿಯ ವೇತನ ಶ್ರೇಣಿ) ಮತ್ತು ಸಹಾಯಕ ಗ್ರಂಥಪಾಲಕ ಡಾಕ್ಯುಮೆಂಟಲಿಸ್ಟ್ ಹುದ್ದೆಗಳ ಸಿಬ್ಬಂದಿಗೆ 1986 ಹಾಗೂ 1996 ಯುಜಿಸಿ:ಐಸಿಎಆರ್ ವೇತನ ಶ್ರೇಣಿಯನ್ನು ವಿಸ್ತರಿಸಿದ ಕ್ರಮಕ್ಕೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಘಟನೋತ್ತರ ಮಂಜೂರಾತಿ ನೀಡಿ ಆದೇಶಿಸಿದೆ.

1. ಯುಜಿಸಿ:ಐಸಿಎಆರ್ ನಿಗದಿಪಡಿಸಿದ ವಿದ್ಯಾರ್ಹತೆಯನ್ನು ಡೆಪ್ಯುಟಿ ಲೈಬ್ರರೀಯನ್ನ ಅಸಿಸ್ಟೆಂಟ್ ಲೈಬ್ರರೀಯನ್ ಹಾಗೂ ಡಾಕ್ಯುಮೆಂಟಲಿಸ್ಟ್ (ಹಿರಿಯ ವೇತನ ಶ್ರೇಣಿ) ಸಹಾಯಕ ಗ್ರಂಥಪಾಲಕರು : ಡಾಕ್ಯುಮೆಂಟಲಿಸ್ಟ್‌ಗಳು ಕಡ್ಡಾಯವಾಗಿ ಹೊಂದಿರತಕ್ಕದ್ದು. ವಿದ್ಯಾರ್ಹತೆಯಲ್ಲಿ ಯಾವುದೇ ಸಡಿಲಿಕೆ ಮಾಡಕೂಡದು. ಯುಜಿಸಿ:ಐಸಿಎಆರ್ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದವರು ರಾಜ್ಯ ವೇತನ ಶ್ರೇಣಿಯಲ್ಲಿಯೇ ಮುಂದುವರೆಯತಕ್ಕದ್ದು.
2. ಪರಿಷ್ಕೃತ ಯುಜಿಸಿ : ಐಸಿಎಆರ್ ವೇತನ ಶ್ರೇಣಿಯನ್ನು ವಿಸ್ತರಿಸಲು ತಗಲುವ ಹೆಚ್ಚುವರಿ ಪ್ರಸಕ್ತ ಸಾಲಿನ ಆರ್ಥಿಕ ವರ್ಷದಲ್ಲಿ ಒದಗಿಸಲಾಗಿರುವ ಅನುದಾನದಿಂದಲೇ ಭರಿಸತಕ್ಕದ್ದು, ಶಿಕ್ಷಕರುಗಳ ಪ್ರಕರಣದಲ್ಲಿ ನಿಗದಿಪಡಿಸಿರುವಂತೆ ಸಂಬಂಧಪಟ್ಟ ಅವಧಿಯ ಬಾಕಿಯನ್ನು ರಾಷ್ಟ್ರೀಯ ಉಳಿತಾಯ ಪತ್ರಗಳಲ್ಲಿ ತೊಡಗಿಸತಕ್ಕದ್ದು.
3. ದಿನಾಂಕ: 1.1.1996 ರಿಂದ 31.3.2000ರ ಅವಧಿಯ ಐಸಿಎಆರ್ ಪಾಲಿನ ಬಾಕಿಯನ್ನು ಐಸಿಎಆರ್‌ನಿಂದ ಪಡೆದುಕೊಳ್ಳತಕ್ಕದ್ದು.
4. ಯುಜಿಸಿ:ಐಸಿಎಆರ್ ವಿದ್ಯಾರ್ಹತೆ ಮತ್ತು ನೇಮಕಾತಿ ವಿಧಾನಗಳನ್ನು ಅಳವಡಿಸಿಕೊಳ್ಳಲು ಈ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಕೃಷಿ ವಿಶ್ವವಿದ್ಯಾಲಯಗಳ ಅಧಿನಿಯಮ ಮತ್ತು ಅದರಡಿಯ ಪರಿನಿಯಮಗಳಿಗೆ ಸೂಕ್ತ ತಿದ್ದುಪಡಿಯನ್ನು ಮಾಡತಕ್ಕದ್ದು.
5. ಇನ್ನು ಮುಂದೆ ಐಸಿಎಆರ್ ಯೋಜನೆಯಡಿ ಬರತಕ್ಕಂತ ಯಾವುದೇ ವಿಧವಾದ ವರ್ಗಗಳ ಹುದ್ದೆಗಳಿಗೆ ಪರಿಷ್ಕೃತ ಯುಜಿಸಿ : ಐಸಿಎಆರ್ ವೇತನ ಶ್ರೇಣಿಯನ್ನು ವಿಸ್ತರಿಸಬೇಕಾಗಿದ್ದಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ಕಡ್ಡಾಯವಾಗಿ ಪಡೆಯಲೇಬೇಕೆಂದು ವಿಶ್ವವಿದ್ಯಾಲಯಗಳಿಗೆ ಕಟ್ಟುನಿಟ್ಟಾಗಿ ಸೂಚಿಸಲಾಗಿದೆ.

ಗ್ರಂಥಪಾಲಕರ ಹಿಂದಿನ ವೇತನ ಹಾಗೂ ಪರಿಷ್ಕೃತ ವೇತನದ ವಿವರವನ್ನು ಅನುಬಂಧದಲ್ಲಿ ತಿಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಸಂಖ್ಯೆ: ಎಫ್‌ಡಿ 427 ವೆಚ್ಚ-4 2003 ದಿನಾಂಕ: 2.7.2003ರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ANNEXURE

**ಕೃಷಿ ವಿಶ್ವವಿದ್ಯಾಲಯದ ಗ್ರಂಥಾಧಿಕಾರಿಗೆ ಪರಿಷ್ಕೃತ ಯುಜಿಸಿ : ಐಸಿಎಆರ್ ವೇತನ ಶ್ರೇಣಿ ಈ ಕೆಳಕಂಡಂತಿದೆ:**

| POSTS | REVEVIOUS SCALE IN Rs. | Revision of pay scale from 1.1.86 to 31.12.95 in Rs. | Revision of pay scale from 1.1.96 in Rs. |
|---|---|---|---|
| 1. Librarian | 1500-2500 | 4500-150-5700-200-7300 | 16400-450-20900-500-22400 |
| 2. Dy. Librarian | 1200-1900 | 3700-125-4950-150-5700 | 12000-420-18300 |
| 3 Asst. Libriarian Sr. Documentalist | - | 3700-125-4950-150-5700 | 12000-420-18300 |
| 4. Asst. Librarian/ Document list | - | 3000-100-3500-125-5000 | 10000-325-15200 |
| 5. Asst. Librarian/ Document list | 700-1600 | 2200-75-2800-100-4000 | 8000-275-13500 |

**G.K. GURANI**
Under Secretary to Government,
Agriculture & Horticulture Department.

P.R. 255

## ಶಿಕ್ಷಣ ಸಚಿವಾಲಯ

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ದಾವಣಗೆರೆಯ ಶ್ರೀ ತರಳಬಾಳು ಜಗದ್ಗುರು ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1) ದಿನಾಂಕ: 27.12.2003ರ ಸಂಖ್ಯೆ: ಇಡಿ 186 ಯುಆರ್‌ಸಿ 2003 ಸರ್ಕಾರಿ ಆದೇಶ.
2) ದಿನಾಂಕ: 04.08.2005 ಸಂಖ್ಯೆ: F.SRO/NCTE/B.P.Ed/2005-06/3325ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿನಾಂಕ: 14.10.2005ರ ಸಂಖ್ಯೆ: ಇಓ/4/2005ರ ಶ್ರೀ ತರಳಬಾಳು ಜಗದ್ಗುರು ಎಜುಕೇಷನ್ ಸೊಸೈಟಿ (ರಿ), ಸಿರಿಗೆರೆ, ಇದರ ಪ್ರಧಾನ ಕಾರ್ಯದರ್ಶಿಯವರ ಪತ್ರ.
4) ದಿನಾಂಕ: 17.10.2003, ಸಂಖ್ಯೆ: ಕುವಿ/ಸಿಡಿಸಿ/04/2003-04ರ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪ್ರಸ್ತಾವನೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 29(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಸಿರಿಗೆರೆಯ ಶ್ರೀ ತರಳಬಾಳು ಜಗದ್ಗುರು ಎಜುಕೇಷನ್ ಸೊಸೈಟಿ (ರಿ)ಯ ಶ್ರೀ ತರಳಬಾಳು ಜಗದ್ಗುರು ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್, ದಾವಣಗೆರೆ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 04.08.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಮೇಲ್ಕಂಡ ಸೊಸೈಟಿಯ ಪ್ರಧಾನ ಕಾರ್ಯದರ್ಶಿಯವರು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4) ರಲ್ಲಿರುವ ಪತ್ರದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರು ಈ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2004-05ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 298 ಯುಆರ್‌ಸಿ 2005, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಿರಿಗೆರೆಯ ಶ್ರೀ ತರಳಬಾಳು ಜಗದ್ಗುರು ಎಜುಕೇಷನ್ ಸೊಸೈಟಿ (ರಿ)ಯ ಶ್ರೀ ತರಳಬಾಳು ಜಗದ್ಗುರು ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್, ದಾವಣಗೆರೆ ಬಿ.ಪಿ.ಎಡ್ ಕಾಲೇಜಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್. 254

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಮುನೊಸೊ 2004, ದಿನಾಂಕ: 27.04.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ತಹಶೀಲ್ದಾರ್, ಆಳಂದ ತಾಲ್ಲೂಕು ಇವರನ್ನು ಸಂಸ್ಥೆಯ ಹಿತದೃಷ್ಟಿಯಿಂದ ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸರ್ಕಾರವು ನೇಮಿಸಿದ ಆಡಳಿತಾಧಿಕಾರಿಯ ಅವಧಿ ದಿನಾಂಕ: 26.10.2005ಕ್ಕೆ ಮುಕ್ತಾಯವಾಗಿದ್ದು, ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಮುನೊಸೊ 2004, ಬೆಂಗಳೂರು, ದಿನಾಂಕ: 25ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 27.10.2005 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 182

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಸತಿ ಸಚಿವಾಲಯ**

**ವಿಷಯ :** ಚಿತ್ರದುರ್ಗ ಜಿಲ್ಲೆ ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/02/ಹೆಚ್ಎಎಸ್2006, ಬೆಂಗಳೂರು, ದಿನಾಂಕ : 19ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆ, ಹಿರಿಯೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಅಬ್ದುಲ್ ಕರೀಂ. — ಸದಸ್ಯರು
   ಚರ್ಚ್ ರಸ್ತೆ, ಹಿರಿಯೂರು ಟೌನ್. ಚಿತ್ರದುರ್ಗ ಜಿಲ್ಲೆ.
2. ಶ್ರೀ ಹೆಗ್ಗೆರೆ ಕೆಂಚಪ್ಪ — ಸದಸ್ಯರು
   ಮಾಜಿ ಮುನ್ಸಿಪಲ್ ಸದಸ್ಯರು, ಹರಿಶ್ಚಂದ್ರಘಾಟ್
   ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ.
3. ಶ್ರೀ ಪನ್ನೀರ್ ಸೇಲ್ವಂ — ಸದಸ್ಯರು
   ಮಾಜಿ ಮುನ್ಸಿಪಲ್ ಅಧ್ಯಕ್ಷರು ,ಪೋದಿಯಮ್ಮ ದೇವಸ್ಥಾನ
   ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ.
4. ಶ್ರೀಮತಿ ಸೌಭಾಗ್ಯವತಿದೇವರು, ಮಾಜಿ ಮುನ್ಸಿಪಲ್ ಸದಸ್ಯರು — ಸದಸ್ಯರು
   ಲಯನೆಸ್ ಮುಖ್ಯ ರಸ್ತೆ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 187

**ಎಸ್. ಇಂದುಮತಿ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ :** ಧಾರವಾಡ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:**10.04.2000**

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಧಾರವಾಡ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/03/ಹೆಚ್ಎಎಸ್2006 ಬೆಂಗಳೂರು, ದಿನಾಂಕ : 20ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಧಾರವಾಡ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಆನಂದ ಆದೋನಿ — ಸದಸ್ಯರು
   ಮದರಮಡ್ಡಿ, ಧಾರವಾಡ.
2. ಶ್ರೀಮತಿ ಉಮಾ — ಸದಸ್ಯರು
   ರಾಮನಗರ, ವನಿತಾ ಸಮಾಜ ಶಾಲೆ ಹತ್ತಿರ
   4ನೇ ಕ್ರಾಸ್, ಧಾರವಾಡ.
3. ಶ್ರೀ ಶಬ್ಬೀಬ್ ಅಹ್ಮದ್ — ಸದಸ್ಯರು
   ಮನಕಿಲ್ಲಾ ಮುಖ್ಯ ರಸ್ತೆ, ಅತ್ತಾರ್ ಬಿಲ್ಡಿಂಗ್, ಧಾರವಾಡ.
4. ಶ್ರೀ ಸತ್ಯಜೀತ ಶರದ ಮೋರೆ — ಸದಸ್ಯರು
   ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ್
   ಪ್ರಧಾನ ಕಚೇರಿ ಹತ್ತಿರ, ಬೆಳಗಾವಿ ರಸ್ತೆ, ಧಾರವಾಡ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 188

**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ :** ಗದಗ ಜಿಲ್ಲೆ ನರಗುಂದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗದಗ ಜಿಲ್ಲೆ, ನರಗುಂದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/08/ಹೆಚ್ಎಎಸ್2006 ಬೆಂಗಳೂರು, ದಿನಾಂಕ : 23ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಗದಗ ಜಿಲ್ಲೆ, ನರಗುಂದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ವಾಸಪ್ಪ ಜೋಗಣ್ಣವರ — ಸದಸ್ಯರು
   ರಾಚಯ್ಯ ನಗರ, ನರಗುಂದ, ಗದಗ ಜಿಲ್ಲೆ.
2. ಶ್ರೀಮತಿ ಗಂಗವ್ವ ಗುಡದರಿ — ಸದಸ್ಯರು
   ಗುಡ್ಡದಕೇರಿ, ನರಗುಂದ, ಗದಗ ಜಿಲ್ಲೆ.
3. ಶ್ರೀ ಸೈಯದ್ ಸಾಬ್ ಬಿಜಲಿಖಾನ — ಸದಸ್ಯರು
   ಲೋದಿಗಲ್ಲಿ, ನರಗುಂದ, ಗದಗ ಜಿಲ್ಲೆ.
4. ಶ್ರೀ ಗೌಡಪ್ಪಗೌಡ ಪಾಟೀಲ — ಸದಸ್ಯರು
   ಸೋಮಾಪೂರ, ನರಗುಂದ, ಗದಗ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 189

**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ :** ಬೀದರ್ ಜಿಲ್ಲೆ ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬೀದರ್ ಜಿಲ್ಲೆ, ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/09/ಹೆಚ್ಎಎಸ್2006 ಬೆಂಗಳೂರು, ದಿನಾಂಕ : 20ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಬೀದರ್ ಜಿಲ್ಲೆ, ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಅನ್ನಪೂರ್ಣಾಬಾಯಿ — ಸದಸ್ಯರು
   ಕೆ.ಹೆಚ್.ಬಿ. ಕಾಲೋನಿ, ಬಸವಕಲ್ಯಾಣ. ಬೀದರ್ ಜಿಲ್ಲೆ
2. ಶ್ರೀ ಮಿರ್ಜಾ ಅನ್ವರ ಬೇಗ — ಸದಸ್ಯರು
   ನಾಲಬಂದ ಗಲ್ಲಿ, ಬಸವಕಲ್ಯಾಣ, ಬೀದರ್ ಜಿಲ್ಲೆ.
3. ಶ್ರೀ ಹಣಮಂತ — ಸದಸ್ಯರು
   ದೇಶಪಾಂಡೆ ಗಲ್ಲಿ, ಬಸವಕಲ್ಯಾಣ, ಬೀದರ್ ಜಿಲ್ಲೆ.

4. ಶ್ರೀ ಚಂದ್ರಶೇಖರ ಸದಸ್ಯರು
ಎಸ್.ಎಸ್.ಕೆ.ಬಿ ಕಾಲೇಜು ರೋಡ್
ತ್ರಿಪೂರಾಂತ, ಬೀದರ್ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ
**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

ಪಿ.ಆರ್. 190

**ವಿಷಯ :** ಗುಲ್ಬರ್ಗಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.
**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/10/ಹೆಚ್ಎಎಸ್2006 ಬೆಂಗಳೂರು, ದಿನಾಂಕ : 16ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಬಾಬುಶಾ ಗಾಯಕವಾಡ ಸದಸ್ಯರು
ಮೆಹತರಗಲ್ಲಿ, ಕಮುನಿಟಿ ಹಾಲ್ ಹತ್ತಿರ
ಗಾಜೀಪೂರ, ಗುಲ್ಬರ್ಗಾ.
2. ಶ್ರೀಮತಿ ಶ್ರೀದೇವಿ ಭೈರಾಮಡಗಿ ಸದಸ್ಯರು
4-138, ರಾಜೇಶ ಬೇಕರಿ ಹತ್ತಿರ, ಮುಕ್ತಂಪೂರ, ಗುಲ್ಬರ್ಗಾ.
3. ಶ್ರೀ ಅಬೇದ ಆಲಿ ಸದಸ್ಯರು
ಮನೆ ನಂ.5-408/7A2, ಖಾಜಾ ಕಾಲೋನಿ, ರೋಜಾ (ಬಿ.), ಗುಲ್ಬರ್ಗಾ.
4. ಶ್ರೀ ವಿದ್ಯಾಸಾಗರ ಶಾಬಾದಿ ಸದಸ್ಯರು
ಜಯನಗರ, ಸೇಡಂ ರಸ್ತೆ, ಗುಲ್ಬರ್ಗಾ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ
**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

ಪಿ.ಆರ್. 191

**ವಿಷಯ :** ಕೋಲಾರ ಜಿಲ್ಲೆ ಬಾಗೇಪಲ್ಲಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.
**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೋಲಾರ ಜಿಲ್ಲೆ, ಬಾಗೇಪಲ್ಲಿ ವಿಧಾನ ಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/11/ಹೆಚ್ಎಎಸ್2006 ಬೆಂಗಳೂರು, ದಿನಾಂಕ : 16ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಕೋಲಾರ ಜಿಲ್ಲೆ, ಬಾಗೇಪಲ್ಲಿ ವಿಧಾನ ಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಕಾಂತಮ್ಮ ಸದಸ್ಯರು
ವಾಲ್ಮೀಕಿ ನಗರ, ಬಾಗೇಪಲ್ಲಿ, ಕೋಲಾರ ಜಿಲ್ಲೆ
2. ಶ್ರೀ ಪಿ. ಓಬಳರಾಜು ಸದಸ್ಯರು
3ನೇ ವಾರ್ಡ್, ಬಾಗೇಪಲ್ಲಿ, ಕೋಲಾರ ಜಿಲ್ಲೆ
3. ಶ್ರೀ ಮಹಮ್ಮದ್ ಅಕ್ರಂ ಸದಸ್ಯರು
ನೇತಾಜಿ ವೃತ್ತ, ಬಾಗೇಪಲ್ಲಿ, ಕೋಲಾರ ಜಿಲ್ಲೆ
4. ಶ್ರೀ ವೈ.ಆರ್. ವೆಂಕಟೇಶ ಬಾಬು ಸದಸ್ಯರು
ಮರಿಯಪ್ಪ ಕಾಂಪೌಂಡ್, ಬಾಗೇಪಲ್ಲಿ, ಕೋಲಾರ ಜಿಲ್ಲೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ
**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

ಪಿ.ಆರ್. 192

**ವಿಷಯ :** ಬಾಗಲಕೋಟೆ ಜಿಲ್ಲೆ ಮುಧೋಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ, ಮುಧೋಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/13/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 20ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ, ಮುಧೋಳ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಕಾಶಿನಾಥ ಲಮಾಣಿ — ಸದಸ್ಯರು
   ಸಾ. ಮುಧೋಳ, ಬಾಗಲಕೋಟೆ ಜಿಲ್ಲೆ.
2. ಶ್ರೀ ರಾಜೇಂದ್ರ ಇಂಗಳೆ — ಸದಸ್ಯರು
   ಸಾ. ಮುಧೋಳ, ಬಾಗಲಕೋಟೆ ಜಿಲ್ಲೆ.
3. ಶ್ರೀಮತಿ ರಜಿಯಾ ಬೇಗಮ್ ಮಖಾನದಾರ್ — ಸದಸ್ಯರು
   ಸಾ. ಮುಧೋಳ, ಬಾಗಲಕೋಟೆ ಜಿಲ್ಲೆ.
4. ಶ್ರೀ ಸೈದು ಲಕ್ಷ್ಮಣ ಭೋವಿ — ಸದಸ್ಯರು
   ಸಾ. ಮುಧೋಳ, ಬಾಗಲಕೋಟೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 193

**ಎಸ್. ಇಂದುಮತಿ**
ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ :** ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಮಹಲಿಂಗಪೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ಮಹಲಿಂಗಪೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/14/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 21ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ಮಹಲಿಂಗಪೂರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಲಕ್ಕಪ್ಪ ಬಸಪ್ಪ ಚಮಕೇರಿ — ಸದಸ್ಯರು
   ಸಾ. ಮಹಲಿಂಗಪೂರ, ಬಾಗಲಕೋಟೆ ಜಿಲ್ಲೆ.
2. ಶ್ರೀ ನಬೀಸಾಬ ಶಿರಾಸಾಬ ಯಕ್ಯಂಬಿ — ಸದಸ್ಯರು
   ಸಾ. ಮಹಲಿಂಗಪೂರ, ಬಾಗಲಕೋಟೆ ಜಿಲ್ಲೆ.
3. ಶ್ರೀಮತಿ ಲಕ್ಷ್ಮಿ ಮಹಲಿಂಗ ಮುದ್ದಾಪೂರ — ಸದಸ್ಯರು
   ಸಾ. ಮಹಲಿಂಗಪೂರ, ಬಾಗಲಕೋಟೆ ಜಿಲ್ಲೆ.
4. ಶ್ರೀ ಯಮನಪ್ಪ ಹನುಮಂತಪ್ಪ ಬಂಡಿವಡ್ಡರ — ಸದಸ್ಯರು
   ಸಾ. ಮಹಲಿಂಗಪೂರ, ಬಾಗಲಕೋಟೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 194

**ಎಸ್. ಇಂದುಮತಿ**
ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ :** ಮೈಸೂರು ಜಿಲ್ಲೆ ನಂಜನಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ನಂಜನಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/15/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 20ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಬಸವರಾಜು ಬಿನ್ ಚಿಕ್ಕಬಸವಯ್ಯ — ಸದಸ್ಯರು
   5ನೇ ಕ್ರಾಸ್, ಅಶೋಕಪುರಂ,
   ನಂಜನಗೂಡು ಟೌನ್, ಮೈಸೂರು ಜಿಲ್ಲೆ.
2. ಶ್ರೀ ಎನ್.ಪಿ. ಕೃಷ್ಣ ಬಿನ್ ಪುಟ್ಟಮಾದಪ್ಪ — ಸದಸ್ಯರು
   ಬೆಸ್ತರ ಬೀದಿ, ಚಾಮಲಾಪುರ
   ನಂಜನಗೂಡು ಟೌನ್, ಮೈಸೂರು ಜಿಲ್ಲೆ.
3. ಶ್ರೀಮತಿ ಅಲಿಮಾಬಿ — ಸದಸ್ಯರು
   ನಂ. 2286, ಮುಸ್ಲಿಂ ಬ್ಲಾಕ್, ಅರೇಬಿಕ್ ಸ್ಕೂಲ್ ರಸ್ತೆ,
   ಚಾಮಲಾಪುರ ಮೊಹಲ್ಲಾ, ನಂಜನಗೂಡು ಟೌನ್, ಮೈಸೂರು ಜಿಲ್ಲೆ.
4. ಶ್ರೀ ಎಸ್. ಕೃಷ್ಣಪ್ಪ ಬಿನ್ ಶ್ರೀಕಂಠಯ್ಯ — ಸದಸ್ಯರು
   ನಾಗೇಶ್ವರ ಲೇ-ಔಟ್, 17ನೇ ಕ್ರಾಸ್, ಶ್ರೀಕಂಠಪುರಿ ಬಡಾವಣೆ,
   ನಂಜನಗೂಡು ಟೌನ್, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 195

**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ :** ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/18/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 17ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ವೆಂಕಟೇಶ್ — ಸದಸ್ಯರು
   ಚಾಮರಾಜಪೇಟೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
2. ಶ್ರೀ ಕೆ.ಎಂ.ಶ್ರೀನಿವಾಸ್ — ಸದಸ್ಯರು
   ಕಂದವಾರ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
3. ಶ್ರೀಮತಿ ಸುಮಿತ್ರ — ಸದಸ್ಯರು
   ವಿಶ್ವೇಶ್ವರಯ್ಯ ಬಡಾವಣೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
4. ಶ್ರೀ ರಿಯಾಜ್ ಅಹಮ್ಮದ್ — ಸದಸ್ಯರು
   ಟಿ.ಜಿ. ಟ್ಯಾಂಕ್ ರಸ್ತೆ
   ಚಿಕ್ಕಬಳ್ಳಾಪುರ ನಗರ, ಕೋಲಾರ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 196

**ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject :** Diversion of 0.026 ha of forest land for construction of Police Wireless Repeater Station near Nandi Statue at Chamundi Hills of Mysore Division.

**Read :**
1. Letter No.A5(7)GFI.CR.1/05-06 dated 15/4/2005 of the Principal Chief Conservator of Forests, Bangalore.
2. Letter No. F.No.11.9/98-FC, dated:3.1.2005 of Government of India, Ministry of Environment and Forests, New Delhi.
3. U.O.Note No. ಸಂಕಇ 111 ಕೆಎಂಯು 2005, dated: 8.12.2005 of the Kannada and Culture Department.

**PREAMBLE:**

The Principal Chief Conservator of Forests, Bangalore vide his letter dated 15.4.2005 read at (1) above has submitted a proposal for diversion of 0.026 ha. of forest land in Chamundi Betta State Forests for construction of Police Wireless Repeater Station Building near Nandi Statue at Chamundi Hills in Mysore District in favour of the Commissioner of Police, Mirza Road, Nazarabad, Mysore under the general approved accorded by Government of India subject to certain conditions.

The Government of India, Ministry of Environment and Forests, New Delhi vide their letter dated: 3-1-2005 read at (2) above conveyed its general approval under section 2 of Forest (Conservation)Act, 1980 for diversion of land to Government Departments for certain activities.

As Nandi Statue is a protected monument the matter was referred to Kannada and Culture Department. The Kannada and Culture Department in its U.O.Note dated 8.12.2005 referred at (3) above has given its consent for construction of Police Wireless Repeater Station near Nandi Statue of Chamundi Hills, Mysore. The construction of the Wireless Repeater Station will be undertaken by Director, Archaeology and Museums, Mysore for and on behalf of the Police Department at the expense of the Police Department subject to the certain conditions.

The proposal has been examined in detail and hence the orders.

**GOVERNMENT ORDER NO. FEE 93 FLL 2005, BANGALORE, DATED: 21st JANUARY 2006**

In the circumstances explained in the preamble and in accordance with the general approval of Government of India in the letter dated 3.1.2005, the Government of Karnataka are pleased to accord approval under section (2) of Forest (Conservation)Act, 1980 for diversion of 0.026 ha. of forest land near Nandi Statue at Chamundi Hills in Chamundi Betta State Forest, Mysore District, in favour of Commissioner of Police, Mirza Road, Nazarabad, Mysore for construction of Police Wireless Repeater Station building by the Director of Archaeology and Museums, Mysore on behalf of the Police Department at the expense of the Police Department subject to the following conditions.

1. The legal status of forest land shall remain unchanged.
2. The lessee shall pay the lease rent as fixed by the Government from time to time.
3. The lease is for a period of 20 years.
4. The leased out area should be used for the purpose for which it is granted. In case the land is not used for the stipulated purpose with in one year or when it no longer needed for the stipulated purpose which ever is earlier the area should be forfeited to the Forest Department under Section 82 of Karnataka Forest Act 1963. The Conservator of Forests, Mysore Circle is authorised to take necessary action in this regard. No Residential building shall be permitted in the proposed area.
5. The Karnataka Forest Act, 1963 and Rules, 1969 will be applicable for violation.
6. The user agency has to pay the Net Present Value{NPV) of forest land diverted under this proposal in accordance with Government Notification dated: 17.1.04.
7. Trees shall be felled only when it becomes necessary and under strict supervision of State Forest Department.
8. The user agency shall pay the cost of extraction of trees as estimated by the Department if felling is necessary.
9. The user agency shall ensure that there should be no damage is caused to the available wildlife in the area.
10. The user agency shall abide by all the conditions imposed upon by Government of India, Government of Karnataka and Principal Chief Conservator of Forests, Bangalore.
11. Compensatory afforestation charges @ twice the number of trees likely to be felled shall be recovered from the user agency before the transfer of the land.
12. The project site should be outside National Parks or Wildlife Sanctuary or protected areas.
13. The user agency shall be responsible for any damage/injury to the flora/fauna in surroundings and therefore shall take all possible measures to conserve the same.
14. The height of the building should not be more than 9` to 10` and it should not be above the ground level of the pedestal of Nandi, which is a state protected monument.(It should be on par with the ground level). If necessary, building may be constructed by digging the ground.
15. The building should be surrounded by greenery by planting trees so that the building is not visible from outside.
16. The rocks should not be blasted.
17. The mantap nearby should be protected without causing any damage.
18. The path passing below Nandi and the steps used by the pedestrians should not be disturbed.
19. The permission granted is subject to the monitoring by the concerned Regional Office of the Ministry of Environment and Forests.
20. The State Forest Department/State Government or the concerned Regional Office may impose from time to time any other conditions in the interest of conservation, protection and development of forests.
21. Any other conditions to be imposed by the Government of India / State Government / Principal Chief Conservator of Forests, will be abided by the lessee.

By Order and in the name of the
Governor of Karnataka,

P.R. 208

**S.R.VATSALA**
Under Secretary to Government,
Forest,Ecology and Environment Department.

**Subject :** Diversion of 70.01 ha. of forest land for establishment of 31.2 MW Wind Power Project in favour of M/s Logaer Machines(India) Limited in and around Hill Ranges of Bukkapatna State Forest in Chickanyakanahalli and Gubbi Taluks in Tumkur District of Karnataka.

**Read :**
1. Letter No. A5(3)GFL. CR.7/05-06,Dated: 24.10.05 of Principal Chief Conservator of Forests, Bangalore.
2. State Government letter No. FEE 164 FLL 2005, dated: 27.10.2005.
3. Letter No. F No.8-97/2005-FC, dated:18.11.2005 of Government of India, Ministry of Environment and Forests, New Delhi.
4. State Government letter No. FEE 164 FLL 2005, dated: 23.12.2005.
5. Letter No. F No. 8-97/2005-FC, dated: 2-1-2006 of Government of India, Ministry of Environment and Forests, New Delhi

**PREAMBLE:**

The Principal Chief Conservator of Forests, Bangalore vide his letter dated 24.10.05 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 70.01 ha. of forest land in Sy.No.34,21,40,1,46,27 and 24 in Chickkanayakanahalli and Sy.No.4 and 31 of Gubbi Range at the Hill region of Bukkapattana State Forest for establishment of 31.2 MW Wind Power Project in favour of M/s Logaer Machines(India) Limited subject to certain conditions.

Accordingly the proposal was recommended to Government of India vide State Government letter dated: 27.10.2005 read at (2) above.

The Government of India, Ministry of Environment and Forests, New Delhi vide their letter dated: 18.11.2005 read at (3) above has given its approval in Principle (Stage-I) subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 22-12-2005 furnished the compliance report and the same has been sent to Government of India vide State Government letter dated: 23-12-2005 read at (4) above.

Finally, Government of India Ministry of Environment and Forests,New Delhi vide their letter dated 2-1-2006 read at(5) above has conveyed its approval (Stage-II) under Section 2 of Forest (Conservation) Act,1980 for diversion of 70.01 ha. of forest land for establishment of 31.2 MW Wind Power Project in favour of M/s Logaer Machines(India) Limited in around Hill Ranges of Bukkapatna State Forest in Chickanayakanahalli and Gubbi Taluks in Tumkur District of Karnataka subject to certain conditions.

The proposal has been examined in detail and hence the order.

**GOVERNMENT ORDER NO. FEE 164 FLL 2005, BANGALORE, DATED: 25th JANUARY 2006.**

In the circumstances explained in the preamble above, Government are pleased to accord sanction under Section 2 of Forest (Conservation) Act,1980 for diversion of 70.01 ha. of forest land for establishment of 31.2 MW Wind Power Project in favour of M/s Logaer Machines(India) Limited in and around Hill Ranges of Bukkapatna State Forest in Chickanayakanahalli and Gubbi Taluks in Tumkur District of Karnataka subject to the following conditions.

1. The legal Status of the forest land shall remain unchanged.
2. The Compensatory Afforestation shall be raised and maintained by the State Forest Department at the project cost.
3. The non-forest land identified for raising compensatory afforestation shall be notified by the State Government as R.F. under Section-4 or PF under Section-29 of the Indian Forest Act, 1927 or under the relevant Section(s) of the local Forest Act, as the case may be, within a period of 6 months. The Nodal officer (Forest Conservation) shall report compliance.
4. After construction of the approach road as per the project plan, the cairns raised by the User Agency shall be substituted by four feet high RCC Pillars at the project cost, including marking on each pillar the forward and backward bearings as well as the distance between adjacent pillars.
5. Any tree felling shall be done only when it is unavoidable, and that too under strict supervision of the State Forest Department.
6. No damage to the flora and fauna of the area shall be caused.
7. The lease period shall be thirty (30) years.
8. The vane tips of the wind turbine shall be painted with orange colour to avoid bird hits.
9. Within the perimeter of wind farm, the User Agency may be allowed to install lesser capacity turbines for optimization of wind energy after following the due procedure prescribed under the Forest (Conservation)Act, 1980.
10. About 65–70% of the forest area leased under the wind power project shall be utilized, if possible, for developing medicinal plant gardens by the State Forest Department at the

project cost. The State Government may take help of National Medicinal Plant Board in creating corridors of medicinal plant gardens. The intervening areas between Medicinal Plant areas between the footprints of two wind mills` should also be planted up with trees of dwarf species at the project cost.

11. The Wind turbine/wind mills to be used on forest land and the applicability of such technology in the country, should have general recognition of the Ministry of Non-Conventional Energy Sources, Government of India.
12. The forest land shall not be used for any purpose other than that specified in the project.
13. It shall be ensured that the project area does not form part of any National Park/Sanctuary.
14. If the land is not required for the purpose for which it is granted the same should be resumed back to the Forest Department by the Conservator of Forests under Section 82 of Karnataka Forest Act 1963.
15. The user agency has to pay the lease rent as fixed by the Government at the time of sanction and any subsequent orders in this regard.
16. The Karnataka Forest Act 1963 and Rules 1969 will be applicable for any violation.
17. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of Karnataka Forest Act 1963.
18. Compensatory afforestation shall be raised at the cost of user agency over equivalent non-forest land at the rate of prevailing at the time of approval(at present it is Rs. 54,200/- per ha.).
19. Only minimum number of trees shall be cut based on actual requirement of the project and user agency shall pay the extraction and transportation charges of trees estimated by the Deputy Conservator of Forests from the proposed land if extracted.
20. The user agency has to pay the Net Present Value as per the Government Notification dated: 17.1.2004 (@ Rs. 5.80 lakhs to Rs. 9.20 lakhs per ha. depending upon the quantity and density of the land.
21. The user agency has to abide by all the terms and conditions as laid by Government of India as per their guidelines dated: 14/5/2004.
22. Any other condition that the CCF (Central) Regional Office, Bangalore may impose from time to time for protection and improvement of flora and fauna in the forest area, shall also be applicable.
23. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By Order and in the name of the
Governor of Karnataka,

P.R. 180

**S.R.VATSALA**
Under Secretary to Government,
Forest,Ecology and Environment Department.

**Subject :** Diversion of 96.790 ha. of forest land for establishment of 46.4 MW Wind Power Project in favour of M/s J.N.Investments & Trading Company Limited in Tumkur (52.130 ha. in Dasudi RF of Bukkapatna Range) and Chitradurga (44.660 ha. in Marikanive RF in Hiriyur Hosadurga Ranges) District of Karnataka.

**Read :**
1. Letter No. A5 (3) GFL.JN. CR. 10 / 05-06, Dated: 24.10.05 of Principal Chief Conservator of Forests, Bangalore.
2. State Government letter No. FEE 163 FLL 2005, dated:27.10.2005.
3. Letter No. F No.8-98/2005-FC, dated:18.11.2005 of Government of India, Ministry of Environment and Forests, New Delhi.
4. State Government letter No. FEE 163 FLL 2005, dated: 23.12.2005.
5. Letter No. F No. 8-98/2005-FC, dated: 2-1-2006 of Government of India, Ministry of Environment and Forests, New Delhi.

**PREAMBLE:**

The Principal Chief Conservator of Forests, Bangalore vide his letter dated 24.10.05 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 96.790 ha. (52.130 ha. in Tumkur and 44.660 ha. in Chitradurga Districts) of forest land for establishing 46.40 MW Wind Power Project in favour of M/s J.N.Investments and Trading Company Pvt. Ltd., Bangalore subject to certain conditions.

Accordingly the proposal was recommended to Government of India vide State Government letter dated: 27.10.2005 read at (2) above.

The Government of India, Ministry of Environment and Forests, New Delhi vide their letter dated: 18.11.2005 read at (3) above has given its approval in Principle (Stage-I) subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 22-12-2005 furnished the compliance report and the same has been sent to Government of India vide State Government letter dated: 23-12-2005 read at (4) above.

Finally, Government of India Ministry of Environment and Forests,New Delhi vide their letter dated 2-1-2006 read at(5) above has conveyed its approval (Stage-II) under Section 2 of Forest (Conservation) Act,1980 for diversion of 96.790 ha. of forest land for establishment of 46.4 MW Wind Power Project in favour of M/s J.N. Investments and Trading Company Limited in Tumkur (52.130 ha. in Dasudi RF of Bukkapatna Range) and Chitradurga (44.660 ha. in Marikanive RF in Hiriyur/Hosadurga Ranges) Districts of Karnataka subject to fulfillment of certain conditions.

The proposal has been examined in detail and hence the order.

**GOVERNMENT ORDER NO. FEE 163 FLL 2005, BANGALORE, DATED: 25th JANUARY 2006.**

In the Circumstances explained in the preamble above, Government are pleased to accord sanction under Section 2 of Forest (Conservation) Act,1980 for diversion of 96.790 ha. of forest land for establishment of 46.4 MW Wind Power Project in favour of M/s J.N. Investments and Trading Company Limited in Tumkur (52.130 ha. in Dasudi RF of Bukkapatna Range) and Chitradurga (44.660 ha. in Marikanive RF in Hiriyur/Hosadurga Ranges) Districts of Karnataka subject to the following conditions.

1. The legal Status of the forest land shall remain unchanged.
2. The Compensatory Afforestation shall be raised and maintained by the State Forest Department at the project cost.
3. The non-forest land identified for raising compensatory afforestation shall be notified by the State Government as R.F. under Section-4 or PF under Section-29 of the Indian Forest Act, 1927 or under the relevant Section(s) of the local Forest Act, as the case may be, within a period of 6 months. The Nodal officer (Forest Conservation) shall report compliance.
4. After construction of the approach road as per the project plan, the cairns raised by the User Agency shall be substituted by four feet high RCC Pillars at the project cost, including marking on each pillar the forward and backward bearings as well as the distance between adjacent pillars.
5. Any tree felling shall be done only when it is unavoidable, and that too under strict supervision of the State Forest Department.
6. No damage to the flora and fauna of the area shall be caused.
7. The lease period shall be thirty (30) years.
8. The vane tips of the wind turbine shall be painted with orange colour to avoid bird hits.
9. Within the perimeter of wind farm, the User Agency may be allowed to install lesser capacity turbines for optimization of wind energy after following the due procedure prescribed under the Forest (Conservation)Act,1980.
10. About 65–70% of the forest area leased under the wind power project shall be utilized, if possible, for developing medicinal plant gardens by the State Forest Department at the project cost. It has to take help of National Medicinal Plant Board in creating corridors of medicinal plant gardens. The intervening areas between Medicinal Plant areas between the footprints of two wind mills` should also be planted up with trees of dwarf species at the project cost.
11. The Wind turbine/wind mills to be used on forest land and the applicability of such technology in the country, should have general recognition of the Ministry of Non-Conventional Energy Sources, Government of India.
12. It shall be ensured that the project area does not form part of any National Park/Sanctuary.
13. The forest land shall not be used for any purpose other than that specified in the project.
14. If the land is not required for the purpose for which it is granted the same should be resumed back to the Forest Department by the Conservator of Forests under Section 82 of Karnataka Forest Act 1963.
15. The user agency has to pay the lease rent as fixed by the Government at the time of sanction and any subsequent orders in this regard.
16. The Karnataka Forest Act 1963 and Rules 1969 will be applicable for any violation.
17. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of Karnataka Forest Act 1963.

18. Compensatory afforestation shall be raised at the cost of user agency over equivalent non-forest land at the rate of prevailing at the time of approval(at present it is Rs. 54,200/- per ha.).
19. Only minimum number of trees shall be cut based on actual requirement of the project and user agency shall pay the extraction and transportation charges of trees estimated by the Deputy Conservator of Forests from the proposed land if extracted.
20. The user agency has to pay the Net Present Value as per the Government Notification dated: 17.1.2004 (@ Rs. 5.80 lakhs to Rs. 9.20 lakhs per ha. depending upon the quantity and density of the land.
21. The user agency has to abide by all the terms and conditions as laid by Government of India as per their guidelines dated: 14/5/2004.
22. Any other condition that the CCF (Central) Regional Office, Bangalore may impose from time to time for protection and improvement of flora and fauna in the forest area, shall also be applicable.
23. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By Order and in the name of the
Governor of Karnataka,

P.R. 181

**S.R.VATSALA**
Under Secretary to Government,
Forest,Ecology and Environment Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಡೆಂಡಮ್**

**ಸಂಖ್ಯೆ: ಆಕುಕ 2 ಎಂಸಿಎಲ್ 2005, ಬೆಂಗಳೂರು, ದಿನಾಂಕ:07ನೇ ಜನವರಿ 2006.**

ದಿನಾಂಕ:20–10–2005 ಸಂಖ್ಯೆ:ಆಕುಕ 2 ಎಂಸಿಎಲ್ 2005ರ ಸರ್ಕಾರಿ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ನಿಯೋಜನೆ ಮೇಲಿರುವ 69 ಉಪನ್ಯಾಸಕರುಗಳನ್ನು ಅನುಬಂಧ–1 ಮತ್ತು 2ರಲ್ಲಿರುವಂತೆ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಸದರಿ ಆದೇಶದ ಅನುಬಂಧ 1ಕ್ಕೆ ಈ ಕೆಳಗಿನಂತೆ ತಿದ್ದುಪಡಿ ಮಾಡಿ ಸೇರ್ಪಡಿಸಲಾಗಿದೆ. ಈ ಕೆಳಕಂಡ ವೈದ್ಯರ ಹೆಸರುಗಳನ್ನು ಅದರಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ದಿನಾಂಕ:20–10–2005ರ ಆದೇಶದ ಷರತ್ತು ಹಾಗೂ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಮತ್ತು ಯಥಾವತ್ತಾಗಿ ಜಾರಿಗೊಳ್ಳುತ್ತವೆ.

**ದಿನಾಂಕ:20–10–2005ರ ಸಂಖ್ಯೆ:ಆಕುಕ 2 ಎಂಸಿಎಲ್ 2005ರ ಸರ್ಕಾರಿ ಆದೇಶದ ಅನುಬಂಧ –1ಕ್ಕೆ ಸೇರ್ಪಡೆ.**

| ಕ್ರ. ಸಂ. | ಹೆಸರು ಮೂಲ ಇಲಾಖೆಯಲ್ಲಿ ಹೊಂದಿರುವ ಪದನಾಮ ಮತ್ತು ಇಲಾಖೆ | ನಿಯೋಜನೆ ಮೇಲೆ ಹೊಂದಿರುವ ಹುದ್ದೆಯ ಪದನಾಮ ಮತ್ತು ಕಾಲೇಜು | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನಿಯೋಜನೆ ಮೇಲೆ ಉಪನ್ಯಾಸಕ ರಾಗಿ ನೇಮಕ ಗೊಂಡ ದಿನಾಂಕ | ವಿಲೀನಗೊಂಡ ಹುದ್ದೆಯ ಹೆಸರು ಪದನಾಮ ಮತ್ತು ಕಾಲೇಜು. |
|---|---|---|---|---|---|---|
| | **ಸಾಮಾನ್ಯ ಶಸ್ತ್ರ ಚಿಕಿತ್ಸಾ ಶಾಸ್ತ್ರ** | | | | | |
| 22(ಎ) | ಡಾ:ಎಸ್.ಆರ್.ರಘು ನಿಯೋಜನೆ ಮೇಲೆ ಜನರಲ್ ಸರ್ಜರಿ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಎಂ.ಎಸ್.ಜನರಲ್ ಸರ್ಜರಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ | 22–07–1969 | 18–08–1997 | 15–09–2004 | ಜನರಲ್ ಸರ್ಜರಿ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು |
| 22(ಬಿ) | ಡಾ:ಎ.ಸಿ.ಗಿರೀಶ್ ನಿಯೋಜನೆ ಮೇಲೆ ಜನರಲ್ ಸರ್ಜರಿ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಎಂ.ಎಸ್.ಜನರಲ್ ಸರ್ಜರಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಆ.ಕು.ಕ. ಸೇವೆಗಳ ಇಲಾಖೆ | 12–06–1974 | 07–09–2002 | 18–04–2005 | ಜನರಲ್ ಸರ್ಜರಿ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು |

| ಒ.ಬಿ.ಜಿ. | | | | | | |
|---|---|---|---|---|---|---|
| 29(ಎ) | ಡಾ:ಸುರೇಶ್.ಎಸ್. ಕಣಕಣ್ಣನವರ್ ನಿಯೋಜನೆ ಮೇಲೆ ಒ.ಬಿ.ಜಿ. ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ತಜ್ಞರು, ಆ.ಕು.ಕ ಸೇವೆಗಳ ಇಲಾಖೆ | 13-03-1962 | 22-08-1991 | 23-09-2005 | ಒ.ಬಿ.ಜಿ. ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. |
| **ಅಸ್ಥಿ ಚಿಕಿತ್ಸಾ ಶಾಸ್ತ್ರ** | | | | | | |
| 39(ಎ) | ಡಾ:ಎಸ್.ರಾಮಚಂದ್ರ ನಿಯೋಜನೆ ಮೇಲೆ ಅಸ್ತಿ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಹಿರಿಯ ತಜ್ಞರು, ಆ.ಕು.ಕ. ಸೇವೆಗಳ ಇಲಾಖೆ | 09-11-1959 | 01-03-1985 | 03-08-2005 | ಅಸ್ತಿ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 210

**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಜಂಟಿ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

**ವಿಷಯ :** ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ನಿವೃತ್ತ ವೈದ್ಯಕೀಯ ಅಧೀಕ್ಷಕರಾದ ಡಾ:ಎಲ್.ಚಂದ್ರಮ್ಮ ಹಾಗೂ ಇತರೆ 8 ಅಧಿಕಾರಿ/ನೌಕರರ ವಿರುದ್ಧ ದಾಖಲಿಸಿದ ದೂರಿನ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಕುರಿತಂತೆ.

**ಓದಲಾಗಿದೆ :** ಕರ್ನಾಟಕ ಲೋಕಾಯುಕ್ತದ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ: Compt / Uplok / BCD 193 / 2003 / DRE-5, ದಿನಾಂಕ 22-08-2005.

**ಪ್ರಸ್ತಾವನೆ:**

1) ಶ್ರೀ ಎ.ಪಿ.ರಂಗನಾಥ್, ವಕೀಲರು ಸಾ:ಅಗರ ಗ್ರಾಮ, ತಾತಗುನಿ ಅಂಚೆ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರು ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ನಿವೃತ್ತ ವೈದ್ಯಕೀಯ ಅಧೀಕ್ಷಕರಾದ ಡಾ:ಎಲ್.ಚಂದ್ರಮ್ಮ ಹಾಗೂ ಇತರೆ ಸಂಬಂಧಿತ 8 ಜನ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಸರ್ಕಾರದ ಹಣ ದುರುಪಯೋಗದ ಬಗ್ಗೆ ಕರ್ನಾಟಕ ಲೋಕಾಯುಕ್ತಕ್ಕೆ ದೂರನ್ನು ಸಲ್ಲಿಸಿದ್ದ ಕಾರಣ ದಿನಾಂಕ 24-03-2003ರಂದು ಲೋಕಾಯುಕ್ತರವರು ಸದರಿ ದೂರಿನ ಬಗ್ಗೆ ಸತ್ಯಾಂಶವನ್ನು ತಿಳಿಯಲು ಸಂಬಂಧಪಟ್ಟ ದಾಖಲೆಗಳನ್ನು ವಶಪಡಿಸಿಕೊಳ್ಳುವಂತೆ ಆದೇಶಿಸಿದ ನಂತರ ವಿಜಿಲೆನ್ಸ್ ನಿರ್ದೇಶಕರು (ಆರೋಗ್ಯ) ರವರು ಸದರಿ ದಾಖಲಾತಿಗಳನ್ನು ಪರಿಶೀಲಿಸಿ ಮೇಲ್ನೋಟಕ್ಕೆ ಆಪಾದನೆಗಳು ನಿಜವಾಗಿರುವುದಾಗಿ ಕಂಡುಬಂದ ಕಾರಣ ಮುಂದಿನ ಕ್ರಮಕೈಗೊಳ್ಳಲು ಅಭಿಪ್ರಾಯಪಟ್ಟ ಮೇರೆಗೆ ಲೆಕ್ಕಪತ್ರ ಅಧೀಕ್ಷಕರು-2, ತಾಂತ್ರಿಕ ವಿಭಾಗ, ಕರ್ನಾಟಕ ಲೋಕಾಯುಕ್ತ ಇವರಿಗೆ ಮುಂದಿನ ತನಿಖೆಗಾಗಿ ದಿನಾಂಕ 13-08-2003ರಂದು ಸದರಿ ದೂರು ಅರ್ಜಿಯನ್ನು ಕಳುಹಿಸಲಾಯಿತು. ಕರ್ನಾಟಕ ಲೋಕಾಯುಕ್ತದ ತನಿಖಾ ವಿಭಾಗವು ಸದರಿ ದೂರಿನ ಬಗ್ಗೆ ವಿವರವಾದ ತನಿಖೆಯನ್ನು ನಡೆಸಿ, ದಿನಾಂಕ 26-07-2005ರಂದು ತಮ್ಮ ವರದಿಯನ್ನು ಸಲ್ಲಿಸಿರುತ್ತದೆ. ಸದರಿ ವರದಿಯಲ್ಲಿ ಈ ಕೆಳಕಂಡ ಅಧಿಕಾರಿಗಳು 2000-01 ಮತ್ತು 2002-03ನೇ ಸಾಲಿನಲ್ಲಿ ಲಕ್ಷಾಂತರ ರೂಪಾಯಿಗಳ ಔಷಧಿಗಳ ಖರೀದಿಯಲ್ಲಿ ಅಧಿಕಾರ ದುರುಪಯೋಗ ಮಾಡಿರುವುದಾಗಿ ಮತ್ತು ಪ್ರಚಲಿತದಲ್ಲಿದ್ದ ಪದ್ಧತಿಯನ್ನು ಅನುಸರಿಸದೆ ಸರ್ಕಾರದ ಬೊಕ್ಕಸಕ್ಕೆ ರೂ.45,31,920/-ಗಳ ನಷ್ಟವನ್ನು ಉಂಟು ಮಾಡಿರುವುದಾಗಿ ವರದಿಸಲಾಗಿದೆ.

1) ಡಾ:ಎಲ್.ಚಂದ್ರಮ್ಮ, ನಿವೃತ್ತ ಅಧೀಕ್ಷಕರು
2) ಶ್ರೀಮತಿ ಆರ್.ವಿ.ರಾಧಾ, ಲೇ ಕಾರ್ಯದರ್ಶಿ ಮತ್ತು ಖಜಾಂಚಿ
3) ಶ್ರೀ ಶಿವನಂಜೇಗೌಡ, ಲೇ ಕಾರ್ಯದರ್ಶಿ ಮತ್ತು ಖಜಾಂಚಿ
4) ಶ್ರೀ ಕೃಷ್ಣಪ್ಪ, ಕಛೇರಿ ಅಧೀಕ್ಷಕರು
5) ಶ್ರೀ ಕಾಂತರಾಜ್, ಪ್ರಥಮ ದರ್ಜೆ ಸಹಾಯಕರು
6) ಶ್ರೀ ವಿಕಾರ್ ಅಹಮದ್, ಪ್ರಥಮ ದರ್ಜೆ ಸಹಾಯಕರು

7) ಶ್ರೀ ಮಹಮದ್ ದಾದಾ ಫೀರ್, ಪ್ರಥಮ ದರ್ಜೆ ಸಹಾಯಕರು
8) ಶ್ರೀಮತಿ ಪಿಂಟೋ.ಎ.ಎಂ., ಪ್ರಥಮ ದರ್ಜೆ ಸಹಾಯಕರು
9) ಶ್ರೀ ಸತೀಶ್, ದ್ವಿತೀಯ ದರ್ಜೆ ಸಹಾಯಕರು

ಅಲ್ಲದೇ ಸದರಿ ಅಧಿಕಾರಿಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಉಲ್ಲಂಘಿಸಿ ಲಕ್ಷಾಂತರ ರೂಪಾಯಿಗಳ ಬೆಲೆ ಬಾಳುವ ವಿದ್ಯುತ್ ಉಪಕರಣಗಳನ್ನು ಖರೀದಿಸಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ರೂ.61,422.00ಗಳ ನಷ್ಟವನ್ನು ಉಂಟು ಮಾಡಲಾಗಿದೆ ಎಂದು ಮತ್ತು ಸದರಿ ಅಧಿಕಾರಿಗಳು ಪ್ರಚಲಿತ ಪದ್ಧತಿಯನ್ನು ಅನುಸರಿಸದೇ ಸ್ಥಳೀಯ ಏಜೆನ್ಸಿಗಳ ಮುಖಾಂತರ ಖರೀದಿ ಮಾಡಿ ಸರ್ಕಾರಕ್ಕೆ ನಷ್ಟವನ್ನುಂಟು ಮಾಡಿರುವುದಲ್ಲದೇ ಸದರಿ ಏಜೆನ್ಸಿಗಳು ಅಧಿಕ ಲಾಭವನ್ನು ಪಡೆಯುವಂತೆ ಮಾಡಿರುವುದಾಗಿ ವರದಿಸಲಾಗಿದೆ.

2) ಮುಂದುವರೆದು ಈ ಅಧಿಕಾರಿಗಳು ಸಂಬಂಧಪಟ್ಟ ನಿಯಮಗಳನ್ನು ಉಲ್ಲಂಘಿಸಿ ಸ್ಥಳೀಯ ಏಜೆಂಟರುಗಳಿಗೆ ಹೆಚ್ಚಿನ ಲಾಭವನ್ನು ದೊರಕಿಸಿಕೊಡುವ ಉದ್ದೇಶದಿಂದ ವೈದ್ಯಕೀಯ ಕಿಟ್ಟುಗಳನ್ನು ಖರೀದಿಸಿರುವುದಾಗಿಯೂ ಹಾಗೂ ಮೇಲಾಧಿಕಾರಿಗಳ ಅನುಮೋದನೆಯನ್ನು ಪಡೆಯದೆ ಮತ್ತು ಸಂಬಂಧಿತ ನಿಯಮಗಳನ್ನು ಅನುಸರಿಸದೆ ಪೀಠೋಪಕರಣಗಳ ಮಾರಾಟಗಾರರಿಗೆ ಹೆಚ್ಚಿನ ಲಾಭವನ್ನು ನೀಡುವ ಉದ್ದೇಶದಿಂದ ಪೀಠೋಪಕರಣಗಳನ್ನು ಖರೀದಿ ಮಾಡಿರುವುದು ಹಾಗೂ ಇದೆಲ್ಲಕ್ಕಿಂತ ಮಿಗಿಲಾಗಿ 2000–01 ಮತ್ತು 2002–03ನೇ ಸಾಲುಗಳಲ್ಲಿ ಸಂಬಂಧಪಟ್ಟ ನಿಯಮಗಳನ್ನು ಉಲ್ಲಂಘಿಸಿ ಅಧಿಕಾರ ದುರುಪಯೋಗ ಮಾಡಿ ಕೆಲವು ಆಯ್ದ ಮುದ್ರಣಕಾರರಿಂದ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಲೇಖನ ಸಾಮಗ್ರಿಗಳನ್ನು ಖರೀದಿಸಿ ಮತ್ತು ಮುದ್ರಿಸಿಕೊಂಡು ಸರ್ಕಾರದ ಬೊಕ್ಕಸಕ್ಕೆ ನಷ್ಟವನ್ನುಂಟು ಮಾಡಿರುವುದಾಗಿ ಸದರಿ ವರದಿಯಲ್ಲಿ ವರದಿಸಲಾಗಿದೆ.

3) ಮೇಲಿನ ಎಲ್ಲಾ ಆಪಾದನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಹಾಗೂ ಸದರಿ ಆಪಾದನೆಗಳು ಅತ್ಯಂತ ಗಂಭೀರ ಸ್ವರೂಪದ್ದಾಗಿದ್ದು ಮತ್ತು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ, ಅವುಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಮೇಲ್ಕಾಣಿಸಿದ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವುದು ಸೂಕ್ತವೆಂದು ಮಾನ್ಯ ಕರ್ನಾಟಕ ಲೋಕಾಯುಕ್ತರವರು ಅಭಿಪ್ರಾಯ ಪಟ್ಟಿದ್ದು, ಸದರಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 14–ಎ ರ ಮೇರೆಗೆ ಕರ್ನಾಟಕ ಲೋಕಾಯುಕ್ತಕ್ಕೆ ಪ್ರಕರಣವನ್ನು ವಹಿಸಿ ಮಂಜೂರಾತಿ ನೀಡುವಂತೆ ಹಾಗೂ ಮೇಲೆ ಕ್ರಮ ಸಂಖ್ಯೆ: 01ರಲ್ಲಿರುವ ಡಾ: ಎಲ್. ಚಂದ್ರಮ್ಮ ರವರು ಈಗಾಗಲೇ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 214ರಡಿ ಮಂಜೂರಾತಿ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

4) ಈ ಮಧ್ಯ ಮೇಲೆ ಕ್ರಮ ಸಂಖ್ಯೆ 02ರಲ್ಲಿರುವ ಶ್ರೀಮತಿ ಆರ್.ವಿ.ರಾಧಾ ರವರು ಸಹ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 214ರಡಿ ಮಂಜೂರಾತಿ ನೀಡಬೇಕಾಗಿರುತ್ತದೆ.

5) ಮೇಲ್ಕಂಡ ಹಿನ್ನಲೆಯಲ್ಲಿ 1984ರ ಕರ್ನಾಟಕ ಲೋಕಾಯುಕ್ತ ಅಧಿನಿಯಮದ 12(3)ನೇ ಪ್ರಕರಣದಡಿ ಆಪಾದಿತ ಅಧಿಕಾರಿಗಳಿಗೆ/ಸಿಬ್ಬಂದಿಗೆ ಕಠಿಣ ದಂಡನೆಯನ್ನು ವಿಧಿಸಲು ಅನುವಾಗುವಂತೆ ಶಿಸ್ತು ನಡವಳಿಯನ್ನು ನಡೆಸಲು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ನಿಯಮ 14–ಎ ರಡಿ ಮತ್ತು ನಿವೃತ್ತ ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಮೇರೆಗೆ ಇಲಾಖಾ ವಿಚಾರಣೆ ಪ್ರಾರಂಭಿಸಲು ಕರ್ನಾಟಕ ಲೋಕಾಯುಕ್ತರು ಮಾಡಿರುವ ಶಿಫಾರಸ್ಸನ್ನು ಅಂಗೀಕರಿಸಿ ಕೆಳಕಂಡ ಆದೇಶವನ್ನು ಹೊರಡಿಸಲು ನಿರ್ಧರಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 130 ಎಂಎಂಸಿ 2005, ಬೆಂಗಳೂರು, ದಿನಾಂಕ:05ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರಾಗಿದ್ದ ಡಾ:ಎಲ್.ಚಂದ್ರಮ್ಮ ಮತ್ತು ಲೇ ಕಾರ್ಯದರ್ಶಿ & ಖಜಾಂಚಿಯಾಗಿದ್ದ ಶ್ರೀಮತಿ ಆರ್.ವಿ.ರಾಧಾ ರವರುಗಳು ಈಗಾಗಲೇ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 214ರಡಿ ನಿಹಿತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ)

ಪಿ.ಆರ್. 200

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ ತರಬೇತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ:ಎಲ್.ಎ.ಡಬ್ಲ್ಯೂ 44 ಎಲ್.ಎ.ಜಿ.88 ದಿನಾಂಕ:20-07-1989.
2) ಸರ್ಕಾರಿ ಆದೇಶ ಸಂಖ್ಯೆ:ಎಸ್.ಡಬ್ಲ್ಯೂಎಲ್ 60 ಎಸ್.ಇ.ಡಬ್ಲ್ಯೂ 89 ದಿನಾಂಕ:02-11-1990.
3) ಸರ್ಕಾರಿ ಆದೇಶ ಸಂಖ್ಯೆ:ಸಕಇ 354 ಎಸ್.ಇ.ಡಬ್ಲ್ಯೂ 93 ದಿನಾಂಕ:30-03-1995.
4) ಸರ್ಕಾರಿ ಆದೇಶ ಸಂಖ್ಯೆ:ಸಕಇ 146 ಬಿಎಂಎಸ್ 1995 ದಿನಾಂಕ:30-03-1996.

5) ಸರ್ಕಾರಿ ಆದೇಶ ಸಂಖ್ಯೆ:ಸಕಇ 116 ಬಿಎಂಎಸ್ 1999 ದಿನಾಂಕ:07-10-1999.

6) ಹಿಂದುಳಿದ ವರ್ಗಗಳ ಆಯುಕ್ತರ ಏಕ ಕಡತ ಸಂ: ಹಿಂವನಿ: ವಿವೇ:-3/ ಸಿಆರ್-1/ 2005-06 ದಿನಾಂಕ: 23-04-2005 ಮತ್ತು 09-11-2005.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಮಾನ್ಯ ಉಪಮುಖ್ಯಮಂತ್ರಿಗಳ 2005-06 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಕಾನೂನು ಪದವೀಧರರಿಗೆ ತರಭೇತಿ ಭತ್ಯೆ ನೀಡುವ ಕಾರ್ಯಕ್ರಮದಡಿ ಫಲಾನುಭವಿಗಳ ಸಂಖ್ಯೆಯನ್ನು ಹೆಚ್ಚಿಸಲು ಉದ್ದೇಶಿಸಿ, ಪ್ರತಿ ಜಿಲ್ಲೆಯಲ್ಲಿ 10 ಮಂದಿ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ತರಭೇತಿ ನೀಡಲು ಉದ್ದೇಶಿಸಿರುವುದಾಗಿ ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಏಕ ಕಡತದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಆಯುಕ್ತರು, ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಹಾಗೂ ಇತರೆ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ ನೀಡುವ ಕಾರ್ಯಕ್ರಮವನ್ನು ಈ ಹಿಂದೆ ಅಡ್ವೋಕೇಟ್ ಜನರಲ್‌ರವರ ಕಛೇರಿಯಲ್ಲಿ ಕಾರ್ಯಗತಗೊಳಿಸಲಾಗುತ್ತಿದೆಂದು ಹಾಗೂ ಈ ಕಾರ್ಯಕ್ರಮವನ್ನು ಉಲ್ಲೇಖ (1) ರ ಸರ್ಕಾರದ ಆದೇಶದನ್ವಯ ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ವರ್ಗಾಯಿಸಲಾಗಿದ್ದು, ಪ್ರಸ್ತುತ ಹಿಂದುಳಿದ ವರ್ಗಗಳ ಇಲಾಖಾ ವತಿಯಿಂದ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಈ ಕಾರ್ಯಕ್ರಮವನ್ನು ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ರೂಪಿಸಲಾದ ನಿಯಮಗಳನ್ವಯ ಅನುಷ್ಠಾನಗೊಳಿಸಲಾಗುತ್ತಿದೆ ಎಂಬುದಾಗಿ ತಿಳಿಸಿದ್ದಾರೆ.

ಹಿಂದುಳಿದ ವರ್ಗಗಳ ಇಲಾಖಾ ವತಿಯಿಂದ ಪ್ರತಿ ವರ್ಷವು 59 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ 04 ವರ್ಷಗಳವರೆಗೆ ಅವರನ್ನು ತರಬೇತಿಯಲ್ಲಿ ಮುಂದುವರೆಸುತ್ತಿರುವುದರಿಂದ ಪ್ರತಿ ವರ್ಷವು ರಾಜ್ಯದ್ಯಾಂತ ಒಟ್ಟು 236 ಅಭ್ಯರ್ಥಿಗಳಿಗೆ (4 ವರ್ಷಗಳು ಸೇರಿ) ತರಬೇತಿ ನೀಡಲಾಗುತ್ತಿದ್ದು ಪ್ರತಿ ಅಭ್ಯರ್ಥಿಗೆ ವಾರ್ಷಿಕ ರೂ.12,000/-ದಂತೆ 236 ಅಭ್ಯರ್ಥಿಗಳಿಗೆ ಒಟ್ಟು ರೂ.28.32 ಲಕ್ಷಗಳ ಆಯವ್ಯಯವು ತರಬೇತಿ ಭತ್ಯೆಗಾಗಿ ಒದಗಿಸಲಾಗುತ್ತಿದೆ. ಹಾಲಿ ಇರುವ ಈ ತರಬೇತಿ ಕಾರ್ಯಕ್ರಮ ಹಿಂದುಳಿದ ವರ್ಗಗಳ ಪ್ರವರ್ಗ-1ರ ಅಭ್ಯರ್ಥಿಗಳಿಗಾಗಿ ಮಾತ್ರ ಇದ್ದು, ವರ್ಗ-1 ಅಭ್ಯರ್ಥಿಗಳು ದೊರಕದಿದ್ದಾಗ ಮಾತ್ರ ಇತರ ವರ್ಗಗಳಿಗೆ ನೀಡಲು ಅವಕಾಶವಿದೆ. ಈ ಕಾರ್ಯಕ್ರಮಕ್ಕೆ ಜಿಲ್ಲಾ ವಲಯ ಯೋಜನೆ ಬಾಬ್ತಿನಲ್ಲಿ ಲೆಕ್ಕ ಶೀರ್ಷಿಕೆ 2225-03-277-2-93ರಡಿಯಲ್ಲಿ ರೂ.28.08ಲಕ್ಷಗಳನ್ನು ಒದಗಿಸಿದೆ.

ಸರ್ಕಾರವು 2005-06ನೇ ಪೂರಕ ಅಂದಾಜಿನಲ್ಲಿ ಕಾನೂನು ಪದವೀಧರರಿಗೆ ತರಬೇತಿ ಕಾರ್ಯಕ್ರಮಕ್ಕೆ ರೂ.25.00 ಲಕ್ಷಗಳನ್ನು ಹೆಚ್ಚುವರಿಯಾಗಿ ಒದಗಿಸಿದ್ದು 2005-06ನೆ ಸಾಲಿಗೆ ತಲಾ ಎರಡು ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾದ 22 ಜಿಲ್ಲೆಗಳಲ್ಲಿ ಜಿಲ್ಲೆಗೆ 8 ಅಭ್ಯರ್ಥಿಗಳನ್ನು ಹೆಚ್ಚುವರಿಯಾಗಿ (2+8=10) ಹಾಗೂ ಮೂರು ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾದ 5 ಜಿಲ್ಲೆಗಳಲ್ಲಿ ಅಂದರೆ ಬಳ್ಳಾರಿ, ಚಿತ್ರದುರ್ಗ, ಧಾರವಾಡ, ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ಹೆಚ್ಚುವರಿಯಾಗಿ ಜಿಲ್ಲೆಗೆ 7 ಅಭ್ಯರ್ಥಿಗಳನ್ನು (3+7=10) ಆಯ್ಕೆ ಮಾಡಬೇಕಾಗಿರುತ್ತದೆ.

ಅಲ್ಪಸಂಖ್ಯಾತರ ಇಲಾಖೆಯಲ್ಲಿ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರನ್ನು ಆಯ್ಕೆ ಮಾಡಿ ತರಬೇತಿ ನೀಡುವ ಕಾರ್ಯಕ್ರಮವು ಜಾರಿಯಲ್ಲಿರುವುದರಿಂದ, ಹಿಂದುಳಿದ ವರ್ಗಗಳ ಇಲಾಖೆಯ ಕಾನೂನು ಪದವೀಧರರಿಗೆ ತರಬೇತಿ ಕಾರ್ಯಕ್ರಮದಡಿ ಹಿಂದುಳಿದ ವರ್ಗಗಳ ಪ್ರವರ್ಗ-2ಬಿಗೆ ಸೇರಿದ ಅಭ್ಯರ್ಥಿಗಳನ್ನು ಹೊರತುಪಡಿಸಿ ಇನ್ನು ಮುಂದೆ ಜಿಲ್ಲೆಗೆ 10 ಅಭ್ಯರ್ಥಿಗಳಂತೆ ಈ ಕೆಳಕಾಣಿಸಿದ ಮೀಸಲಾತಿಯನ್ವಯ ಆಯ್ಕೆ ಮಾಡಬಹುದಾಗಿರುತ್ತದೆ.

1.ಪ್ರವರ್ಗ-1 15%
2.ಪ್ರವರ್ಗ-2ಎ 53%
3.ಪ್ರವರ್ಗ-3ಎ 15%
4.ಪ್ರವರ್ಗ-3ಬಿ 17% (ಕ್ರಿಶ್ಚಿಯನ್ ಮತ್ತು ಜೈನರನ್ನು ಅಲ್ಪಸಂಖ್ಯಾತರೆಂದು ಪರಿಗಣಿಸಿ ಅಲ್ಪಸಂಖ್ಯಾತರ ಇಲಾಖೆಯಿಂದ ಸೌಲಭ್ಯ ನೀಡುತ್ತಿರುವ ಮೇರೆಗೆ ಈ ಜಾತಿಗಳ ಅಭ್ಯರ್ಥಿಗಳನ್ನು ಹೊರತುಪಡಿಸಿದಂತೆ)

ಪ್ರಸ್ತುತ ಮಾನ್ಯ ಉಪ ಮುಖ್ಯಮಂತ್ರಿಗಳವರ 2005-06ನೆ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಪ್ರತಿ ವರ್ಷವು ಜಿಲ್ಲೆಗೆ 10 ಮಂದಿಯಂತೆ ರಾಜ್ಯದ್ಯಾಂತ ಒಟ್ಟು 270 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತರಬೇತಿ ನೀಡುವ ಈ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ, ಪ್ರಸ್ತುತ ಜಾರಿಯಲ್ಲಿರುವ ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಲ್. 68/ಎಸ್.ಇ.ಡಬ್ಲ್ಯೂ 89 ದಿನಾಂಕ:02-11-1990ರ ಆದೇಶದೊಂದಿಗೆ ಲಗತ್ತಿಸಿದ ಕಾರ್ಯಕ್ರಮದ ನಿಬಂಧನೆಯ ಕ್ರಮ ಸಂಖ್ಯೆ:7ಕ್ಕೆ ಕೆಳಕಂಡ ತಿದ್ದುಪಡಿ ಮಾಡಲು ಪ್ರಸ್ತಾಪಿಸಿದ್ದಾರೆ.

| ಜಾರಿಯಲ್ಲಿರುವ ನಿಬಂಧನೆ: | ತಿದ್ದುಪಡಿಗೆ ಪ್ರಸ್ತಾಪಿಸಿರುವ ನಿಬಂಧನೆ: |
|---|---|
| The Committee shall interview the candidates after assessing their suitability, select the required Number of Candidates belonging to Scheduled Caste, Scheduled Tribes and Group-A. If no Group A Candidates are available, then the selection has to be made from the candidates belonging to Group-B Category if there are no suitable Candidates form this Group, then a candidate could be selected from Group-C,D or E. | The Committee shall interview the candidates after assessing their suitability, select the required Number of Candidates belonging to Scheduled Caste, Scheduled Tribes and Backward Classes. Among Backward Classes the Candidates belonging to Category-1, 2A, 3A and 3B shall be selected at the ratio of 15%, 53%, 15% and 17% respectively, subject to a minimum of two candidates from Cat-1. If no suitable candidates are available in any category then the selection has to be made from the category in which application are available, based on the above percentage. |

**ಸರ್ಕಾರದ ಆದೇಶ ಸಂಖ್ಯೆ:ಸಕಇ 446 ಬಿಎಂಎಸ್ 2005 ಬೆಂಗಳೂರು, ದಿನಾಂಕ:01ನೇ ಡಿಸೆಂಬರ್ 2005**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಸರ್ಕಾರದ ಆದೇಶ ಸಂಖ್ಯೆ:ಎಸ್.ಡಬ್ಲ್ಯೂಎಲ್ 68/ಎಸ್.ಇ.ಡಬ್ಲ್ಯೂ 89 ದಿನಾಂಕ:02-11-1990ರ ಆದೇಶದ ಅನುಬಂಧದಲ್ಲಿನ ನಿಬಂಧನೆಯ ಕ್ರಮ ಸಂಖ್ಯೆ 7ರಲ್ಲಿ ಕಂಡುಬರುವ "The Committee shall interview the candidates after assessing their suitability, select the required Number of Candidates belonging to Scheduled Caste, Scheduled Tribes and Group-A. If no Group A Candidates are available, then the selection has to be made from the candidates belonging to

Group-B Category if there are no suitable Candidates form this Group, then a candidate could be selected from Group-C,D or E." ಎಂಬ ಪದಗಳನ್ನು ಮಾರ್ಪಡಿಸಿ ಆ ಪದಗಳ ಸ್ಥಾನದಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಪದಗಳನ್ನು ಸೇರಿಸಿಕೊಳ್ಳಲು ಆದೇಶಿಸಲಾಗಿದೆ.

"The Committee shall interview the candidates after assessing their suitability, select the required Number of Candidates belonging to Scheduled Caste, Scheduled Tribes and Backward Classes. Among Backward Classes the Candidates belonging to Category-1,2A,3A and 3B shall be selected at the ratio of 15%,53%,15% and 17% respectively, subject to a minimum of two candidates from Cat-1. If no suitable candidates are available in any category then the selection has to be made from the category in which application are available, based on the above percentage."

ಜಿಲ್ಲಾವಾರು ಹಾಲಿ ಆಯ್ಕೆ ಮಾಡುತ್ತಿರುವ ಅಭ್ಯರ್ಥಿಗಳ ಸಂಖ್ಯೆ ಮತ್ತು ಈಗ ಹೆಚ್ಚುವರಿಯಾಗಿ ಆಯ್ಕೆ ಮಾಡಬೇಕಾದ ಅಭ್ಯರ್ಥಿಗಳ ಸಂಖ್ಯೆಯನ್ನು ಅನುಬಂಧ-1ರಲ್ಲಿ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ
**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ:ಸಕಇ ೪೪೬ ಬಿಎಂಎಸ್ ೨೦೦೫ರ ಅನುಬಂಧ - 1**
**ಕಾನೂನು ಪದವೀಧರರಿಗೆ ತರಬೇತಿ**
**ಲೆಕ್ಕ ಶೀರ್ಷಿಕೆ 2225–03–277–2–93**
**(ಜಿಲ್ಲಾವಲಯ ಯೋಜನೆ)**

| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಆಯ್ಕೆ ಮಾಡುತ್ತಿರುವ ಅಭ್ಯರ್ಥಿಗಳ ಸಂಖ್ಯೆ | ಈಗ ಹೆಚ್ಚುವರಿಯಾಗಿ ಆಯ್ಕೆ ಮಾಡಬೇಕಾದ ಅಭ್ಯರ್ಥಿಗಳ ಸಂಖ್ಯೆ | ಒಟ್ಟು ಅಭ್ಯರ್ಥಿಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಬೆಂಗಳೂರು ನಗರ | 2 | 8 | 10 |
| 2 | ಬೆಂಗಳೂರು ಗ್ರಾಮಾಂತರ | 2 | 8 | 10 |
| 3 | ಬಳ್ಳಾರಿ | 3 | 7 | 10 |
| 4 | ಬೆಳಗಾಂ | 2 | 8 | 10 |
| 5 | ಬೀದರ್ | 2 | 8 | 10 |
| 6 | ಬಿಜಾಪುರ | 2 | 8 | 10 |
| 7 | ಬಾಗಲಕೋಟೆ | 2 | 8 | 10 |
| 8 | ಚಿಕ್ಕಮಂಗಳೂರು | 2 | 8 | 10 |
| 9 | ಚಿತ್ರದುರ್ಗ | 3 | 7 | 10 |
| 10 | ಚಾಮರಾಜನಗರ | 2 | 8 | 10 |
| 11 | ದಕ್ಷಿಣ ಕನ್ನಡ | 2 | 8 | 10 |
| 12 | ಧಾರವಾಡ | 3 | 7 | 10 |
| 13 | ದಾವಣಗೆರೆ | 2 | 8 | 10 |
| 14 | ಗುಲ್ಬರ್ಗಾ | 2 | 8 | 10 |
| 15 | ಗದಗ್ | 2 | 8 | 10 |
| 16 | ಹಾಸನ | 2 | 8 | 10 |
| 17 | ಹಾವೇರಿ | 2 | 8 | 10 |
| 18 | ಕೊಡಗು | 2 | 8 | 10 |
| 19 | ಕೋಲಾರ | 3 | 7 | 10 |
| 20 | ಕೊಪ್ಪಳ | 2 | 8 | 10 |
| 21 | ಮಂಡ್ಯ | 2 | 8 | 10 |
| 22 | ಮೈಸೂರು | 2 | 8 | 10 |
| 23 | ರಾಯಚೂರು | 2 | 8 | 10 |

| 1 | 2 | 3 | 4 | 5 |
|---|---|---|---|---|
| 24 | ಶಿವಮೊಗ್ಗ | 2 | 8 | 10 |
| 25 | ತುಮಕೂರು | 3 | 7 | 10 |
| 26 | ಉತ್ತರ ಕನ್ನಡ | 2 | 8 | 10 |
| 27 | ಉಡುಪಿ | 2 | 8 | 10 |
| ಒಟ್ಟು | | 59 | 211 | 270 |

**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 203

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಮಮ್ತಾಜ್.ಡಿ.ಬೆಂಡಿಗೇರಿ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ, ವಿಮ್ಸ್, ಬಳ್ಳಾರಿ ಇವರ ವಿರುದ್ಧ ಲೋಕಾಯುಕ್ತ ಮೊಕದ್ದಮೆ ಪ್ರಕರಣ ಸಂಬಂಧ ಅಂತಿಮ ಆದೇಶ.

**ಓದಲಾಗಿದೆ :**
1) ದಿನಾಂಕ 23-02-2001ರ ಸರ್ಕಾರಿ ಆದೇಶ ಸಂಖ್ಯೆ: ಆಕುಕ 409 ಎಂಎಂಸಿ 2000.
2) ದಿನಾಂಕ 25-06-2001ರ ಸರ್ಕಾರಿ ಆದೇಶ ಸಂಖ್ಯೆ: ಆಕುಕ 409 ಎಂಎಂಸಿ 2000.
3) ದಿನಾಂಕ 21-05-2002ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 409 ಎಂಎಂಸಿ 2000.
4) ದಿನಾಂಕ 27-05-2003ರ ಸರ್ಕಾರಿ ಆದೇಶ ಸಂಖ್ಯೆ: ಆಕುಕ 409 ಎಂಎಂಸಿ 2000.
5) ವಿಶೇಷ ಪ್ರಕರಣ ಸಂಖ್ಯೆ: 166/2001ರ ಸಂಬಂಧ ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬಳ್ಳಾರಿ ನ್ಯಾಯಾಲಯವು ದಿನಾಂಕ 25-03-2003ರಂದು ನೀಡಿರುವ ಆದೇಶ.
6) ಅಪರ ನಿಬಂಧಕರು (ವಿಚಾರಣೆಗಳು-4), ಕರ್ನಾಟಕ ಲೋಕಾಯುಕ್ತ ರವರು ನೀಡಿರುವ ವಿಚಾರಣಾ ವರದಿ ಸಂಖ್ಯೆ: LOK / ARE-4 / ENQ-14 / 03-04, ದಿನಾಂಕ 25-03-2004.
7) ಮಾನ್ಯ ಉಪಲೋಕಾಯುಕ್ತರವರ ಪತ್ರ ಸಂಖ್ಯೆ: LOK / ARE-4 / ENQ-14 / 03-04, ದಿನಾಂಕ 19-07-2005.

**ಪ್ರಸ್ತಾವನೆ:**

1) ಡಾ: ಮಮ್ತಾಜ್.ಡಿ.ಬೆಂಡಿಗೇರಿ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ, ವಿಮ್ಸ್, ಬಳ್ಳಾರಿ ಇವರು ದಿನಾಂಕ 14-06-2001ರಂದು ಶ್ರೀಮತಿ ಕೆ.ಹೇಮಾವತಿ ಕೋಂ ಬಾಬು, ಕಾಟೆಗುಡ್ಡ, ಬಳ್ಳಾರಿ ಇವರಿಗೆ ಚಿಕಿತ್ಸೆ ನೀಡಲು ರೂ.500.00ಗಳ ಲಂಚದ ಹಣವನ್ನು ಪಡೆಯುತ್ತಿದ್ದ ಸಂದರ್ಭದಲ್ಲಿ ಲೋಕಾಯುಕ್ತರ ಬಲೆಗೆ ಸಿಕ್ಕಿ ಬಿದಿದ್ದು, ಲೋಕಾಯುಕ್ತದ ಅಪರ ಮಹಾ ನಿರೀಕ್ಷಕರ ಶಿಫಾರಸ್ಸಿನ ಮೇರೆಗೆ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ 23-02-2001ರ ಆದೇಶದಲ್ಲಿ ಆದೇಶಿಸಲಾಗಿತ್ತು. ಸದರಿಯವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಯಲ್ಲಿ ಓದಲಾದ 13(2)ರಡಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ 25-06-2001ರ ಆದೇಶದಲ್ಲಿ ಅನುಮತಿ ನೀಡಲಾಗಿತ್ತು ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ 21-05-2002ರ ಅಧಿಸೂಚನೆಯಲ್ಲಿ ಸದರಿಯವರ ವಿರುದ್ಧ ಲೋಕಾಯುಕ್ತ ಪ್ರಕರಣದಲ್ಲಿ ಬಾಕಿ ಇರುವ ಶಿಸ್ತು ಕ್ರಮವನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಸದರಿಯವರ ಸೇವೆಯನ್ನು ವಿಮ್ಸ್, ಬಳ್ಳಾರಿ ಇಲ್ಲಿಂದ ಹಿಂದಕ್ಕೆ ಪಡೆದು ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ವಿಭಾಗದಲ್ಲಿ ಖಾಲಿ ಇದ್ದ ಸಹಾಯಕ ಪ್ರಾಧ್ಯಾಪಕ ಹುದ್ದೆಗೆ ನೇಮಿಸಲಾಗಿತ್ತು. ಇದೇ ಪ್ರಕರಣದ ಸಂಬಂಧ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಸಹ ಜರುಗಿಸಲು ಪ್ರಕರಣವನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ 27-05-2003ರ ಆದೇಶದಲ್ಲಿ ಲೋಕಾಯುಕ್ತರವರಿಗೆ ವಹಿಸಲಾಗಿತ್ತು.

2) ಲೋಕಾಯುಕ್ತವು ಪ್ರಕರಣವನ್ನು ಪರಿಶೀಲಿಸಿ ವಿಶೇಷ ಪ್ರಕರಣ ಸಂಖ್ಯೆ: 166/2001ರನ್ನು ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬಳ್ಳಾರಿ ಇವರ ಮುಂದೆ ದಾಖಲಿಸಿದ್ದು, ಸದರಿ ನ್ಯಾಯಾಲಯವು ಮೇಲೆ (5)ರಲ್ಲಿ ಓದಲಾದ ದಿನಾಂಕ 25-03-2003ರ ಆದೇಶದಲ್ಲಿ ಆರೋಪಿಯನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ. ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ಪ್ರಕರಣವು ಯೋಗ್ಯವಾದುದಲ್ಲವೆಂದು ಸರ್ಕಾರವು ತೀರ್ಮಾನಿಸಿದೆ.

3) ಅಪರ ನಿಬಂಧಕರು (ವಿಚಾರಣೆಗಳು-04), ಕರ್ನಾಟಕ ಲೋಕಾಯುಕ್ತ ಇವರು ವಿಚಾರಣೆಯನ್ನು ನಿಯಮಾನುಸಾರ ಜರುಗಿಸಿ ಆರೋಪವು ತನಿಖೆಯಿಂದ ಸಾಬೀತಾಗಿರುವುದಿಲ್ಲವೆಂದು ಮೇಲೆ (6)ರಲ್ಲಿ ಓದಲಾದ ವರದಿಯಲ್ಲಿ ತಿಳಿಸಿದ್ದು, ಮಾನ್ಯ ಉಪಲೋಕಾಯುಕ್ತರು ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಅಂಗೀಕರಿಸಿ ಪ್ರಕರಣದಲ್ಲಿ ಮುಂದಿನ ನಡವಳಿಯನ್ನು ಕೈಬಿಡಲು ಶಿಫಾರಸ್ಸು ಮಾಡಿರುತ್ತಾರೆ.

4) ಬಳ್ಳಾರಿ ವಿಶೇಷ ನ್ಯಾಯಾಧೀಶರ ನ್ಯಾಯಾಲಯ ನೀಡಿರುವ ಆದೇಶ ಹಾಗೂ ಲೋಕಾಯುಕ್ತದ ಅಪರ ನಿಬಂಧಕರು (ವಿಚಾರಣೆಗಳು-04) ಇವರು ನೀಡಿರುವ ವಿಚಾರಣಾ ವರದಿಯನ್ನು ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳೊಂದಿಗೆ ಪರಿಶೀಲಿಸಿ, ಲೋಕಾಯುಕ್ತದ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ತಳ್ಳಿಹಾಕಲು ಯಾವುದೇ ಸಕಾರಣಗಳು ಇಲ್ಲದೇ ಇರುವುದರಿಂದ ಮಾನ್ಯ ಉಪಲೋಕಾಯುಕ್ತರವರ ಶಿಫಾರಸ್ಸನ್ನು ಅಂಗೀಕರಿಸಿ ಡಾ: ಮಮ್ತಾಜ್ ಡಿ.ಬೆಂಡಿಗೇರಿ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ, ವಿಮ್ಸ್, ಬಳ್ಳಾರಿ ಇವರ ವಿರುದ್ಧ ಇರುವ ಆರೋಪವನ್ನು ಕೈಬಿಟ್ಟು ಆರೋಪ ಮುಕ್ತಗೊಳಿಸಲು ಹಾಗೂ ಇವರ ದಿನಾಂಕ 08-03-2001ರಿಂದ 14-06-2002ರ ವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(1)(ಬಿ)ರ ಮೇರೆಗೆ ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಲು ಸರ್ಕಾರವು ತೀರ್ಮಾನಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 77 ಎಂಎಂಸಿ 2004, ಬೆಂಗಳೂರು, ದಿನಾಂಕ 06ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸಿನ ಮೇರೆಗೆ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಅಂಗೀಕರಿಸಿ ಡಾ: ಮಮ್ತಾಜ್ ಡಿ.ಬೆಂಡಿಗೇರಿ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ, ವಿಮ್ಸ್, ಬಳ್ಳಾರಿ ಇವರನ್ನು ಆರೋಪ ಮುಕ್ತಗೊಳಿಸಿ ಆದೇಶಿಸಿದೆ.

ಇವರ ದಿನಾಂಕ 08-03-2001ರಿಂದ 14-06-2002ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(1)(ಬಿ) ಮೇರೆಗೆ ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 164

**ಎಸ್.ಎನ್.ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಿಷಯ :** ಬೆಂಗಳೂರು ವೈದ್ಯಕೀಯ ಕಾಲೇಜಿಗೆ ನಿಮಾನ್ಸ್‌ನ ಪ್ರಾಧ್ಯಾಪಕರುಗಳನ್ನು ಗೌರವ ಪ್ರಾಧ್ಯಾಪಕರಾಗಿ / ಸಮಾಲೋಚಕರಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1) ದಿ:22-10-2005 ಸಂಖ್ಯೆ:ಡಿ28/2006ರ ನಿಮಾನ್ಸ್‌ನ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

ಬೆಂಗಳೂರು ವೈದ್ಯಕೀಯ ಕಾಲೇಜಿನ ನರ ರೋಗ ಶಾಸ್ತ್ರ ವಿಭಾಗದ ರೋಗಿಗಳ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಬೋಧಕ ಆಸ್ಪತ್ರೆಗಳಲ್ಲಿರುವ ನರ ರೋಗ ಶಾಸ್ತ್ರ ಪ್ರಾಧ್ಯಾಪಕರ ಹುದ್ದೆಗಳಿಗೆ ನಿಮಾನ್ಸ್‌ನ ಪ್ರಾಧ್ಯಾಪಕರುಗಳನ್ನು ಗೌರವ ಪ್ರಾಧ್ಯಾಪಕರನ್ನಾಗಿ / ಸಮಾಲೋಚಕರನ್ನಾಗಿ ನೇಮಿಸುವುದು ಅತ್ಯಗತ್ಯವಾಗಿದೆ. ಈ ಸಂಬಂಧ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ನಿಮಾನ್ಸ್‌ನ ನಿರ್ದೇಶಕರು ಸದರಿ ಪ್ರಸ್ತಾವನೆಗೆ ಸಹಮತಿಯನ್ನು ನೀಡಿರುವ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 153 ಎಂಎಂಸಿ 2005, ದಿನಾಂಕ 20ನೇ ಜನವರಿ 2006**

ಬೆಂಗಳೂರು ನಿಮಾನ್ಸ್‌ನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಪ್ರಾಧ್ಯಾಪಕರುಗಳನ್ನು ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಗೌರವ ಪ್ರಾಧ್ಯಾಪಕರಾಗಿ/ ಸಮಾಲೋಚಕರಾಗಿ ನೇಮಿಸಿ ಆದೇಶಿಸಿದೆ.

1) ಡಾ:ಡಿ.ನಾಗರಾಜ
ನರರೋಗ ಶಾಸ್ತ್ರ ಪ್ರಾಧ್ಯಾಪಕರು ಮತ್ತು ಉಪಕುಲಪತಿಗಳು / ನಿರ್ದೇಶಕರು, ನಿಮಾನ್ಸ್, ಬೆಂಗಳೂರು.

2) ಡಾ:ವಾಣಿ ಸಂತೋಷ್
ಹೆಚ್ಚುವರಿ ಪ್ರಾಧ್ಯಾಪಕರು ಮತ್ತು ನರರೋಗ ಲಕ್ಷಣ ಶಾಸ್ತ್ರ ವಿಭಾಗದ ಮುಖ್ಯಸ್ಥರು, ನಿಮಾನ್ಸ್, ಬೆಂಗಳೂರು.

3) ಡಾ:ಎಸ್.ಜಿ.ಶ್ರೀಕಾಂತ್
ನ್ಯೂರೋ ರೇಡಿಯಾಲಜಿ ಸಹಾಯಕ ಪ್ರಾಧ್ಯಾಪಕರು, ನಿಮಾನ್ಸ್, ಬೆಂಗಳೂರು.

4) ಡಾ:ಜಿ.ಎಸ್.ಉಮಾಮಹೇಶ್ವರರಾವ್
ಪ್ರಾಧ್ಯಾಪಕರು ಮತ್ತು ನ್ಯೂರೋ ಅನೆಸ್ಥಿಸ್ಯಾಲಜಿ ವಿಭಾಗದ ಮುಖ್ಯಸ್ಥರು, ನಿಮಾನ್ಸ್, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 165

**ಎಸ್.ಎನ್.ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಿಷಯ :** ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ಹಿಂದಿನ ಗೌರವ ಪ್ರಾಧ್ಯಾಪಕರಾದ ಡಾಃ ಇಂದಿರಾ ನರಸಿಂಹನ್ ರವರಿಂದ ವಸತಿಗೃಹದ ಬಾಡಿಗೆ ಮತ್ತು ದಂಡ ಬಾಡಿಗೆ ವಸೂಲಾತಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :** 1) ತಾಃ ೦೭.೧೦.೯೬ ಸಂಖ್ಯೆಃ ಎಂಇಬಿ(೨)೬೧ಃ೮೭-೮೮ ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ

2) ತಾಃ ೨೮.೦೬.೨೦೦೧ ಸಂಖ್ಯೆಃ ಎಎಆರ್ಃಎಂಇಃ೨೨ಃ೯೫-೯೬ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ

3) ತಾಃ ೦೮.೦೪.೨೦೦೩ ಹಾಗೂ ೦೭.೦೨.೨೦೦೪ರ ಡಾಃ ಇಂದಿರಾ ನರಸಿಂಹನ್‌ರವರ ಅರ್ಜಿ

**ಪೀಠಿಕೆ :**

೧) ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆಯ ಹಿಂದಿನಗೌರವ ಪ್ರಾಧ್ಯಾಪಕರಾದ ಡಾಃ ಇಂದಿರಾ ನರಸಿಂಹನ್‌ರವರಿಂದ ಬಾಕಿ ಇರುವ ರೂ. 40678.00 ನ್ನು ವಸತಿಗೃಹದ ಬಾಡಿಗೆ ಮತ್ತು ದಂಡ ಬಾಡಿಗೆಯನ್ನು 1964 ರ ಕರ್ನಾಟಕ ಭೂಕಂದಾಯ ಅಧಿನಿಯಮದ 164 ನೇ ಪ್ರಕರಣದಡಿ ಭೂ ಕಂದಾಯ ಬಾಕಿ ಸ್ವರೂಪದಲ್ಲಿ (as arrears of land Revenue) ವಸೂಲಿ ಮಾಡಲು ತತ್ವಶಃ ನಿರ್ಧರಿಸಲಾಗಿತ್ತು.

೨. ಅವರ ಕೋರಿಕೆಯನ್ನು ಅಂಗೀಕರಿಸಿ ಅವರು ವೈಯುಕ್ತಿಕವಾಗಿ ಹಿಯರಿಂಗ್‌ಗೆ ಹಾಜರಾಗಿ ಅಹವಾಲನ್ನು ಮಂಡಿಸಲು ಅನುವಾಗುವಂತೆ ತಾಃ 07.02.2004 ರಂದು ಅವರಿಗೆ ಅವಕಾಶ ಕಲ್ಪಿಸಲಾಗಿತ್ತು. ಅದರಂತೆ ಅವರು ತಾಃ 07.02.2004 ರಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ರವರ ಮುಂದೆ ಕೆಲವು ದಾಖಲೆಗಳನ್ನು ಮಂಡಿಸಿ, ಅವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇಲ್ಲವೆಂದು ಆದೇಶಹೊರಡಿಸುವಂತೆ ಕೋರಿದ್ದರು.

೩. ತಾಃ 07.02.2004 ರಂದು ಅವರು ಸಲ್ಲಿಸಿರುವ ಮನವಿಯ ಒಟ್ಟಾರೆ ಸಾರಾಂಶದಂತೆ ತಾಃ 23.07.1986 ರಿಂದ 30.09.1989 ರವರೆಗೆ ಬೌರಿಂಗ್ ಆಸ್ಪತ್ರೆಯ ವಸತಿ ಗೃಹದಲ್ಲಿ ವಾಸವಾಗಿದ್ದರು. ವಸತಿಗೃಹ ಮಂಜೂರಾತಿ ಆದೇಶದಲ್ಲಿ ಅದರ ಬಾಡಿಗೆಯನ್ನು 45 ರೂ.ಗಳೆಂದು ನಿಗದಿಪಡಿಸಲಾಗಿತ್ತು. ಅದರಂತೆ ತಾಃ 23.07.1986 ರಿಂದ 30.09.1989 ರವರೆಗೆ ಪಾವತಿ ಮಾಡಿ ಅದರ ರಶೀತಿಗಳನ್ನು

ಸಲ್ಲಿಸಿದ್ದಾರೆ. ಆದಕಾರಣ ಅವರು ಯಾವುದೇ ಬಾಡಿಗೆ ಬಾಕಿಯನ್ನು ಉಳಿಸಿಕೊಂಡಿಲ್ಲ. ವಸತಿಗೃಹವನ್ನು ಪಡೆಯುವಾಗ ಕೆಸಿಎಸ್ಆರ್ಎಸ್‌ಗೆ ಬದ್ಧವಾಗಿರುವುದಾಗಿ ಬರೆದುಕೊಟ್ಟಿರುವ ಕರಾರಿನಲ್ಲಿ ಯಾವುದೇ ವಿವಾದವಿಲ್ಲ. ಅವರು ಸರ್ಕಾರಿ ನೌಕರರಾಗಿರಲಿಲ್ಲ. ಖಾಸಗಿ ವೈದ್ಯಕೀಯ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅದಕ್ಕೆ ಬೌರಿಂಗ್ ಆಸ್ಪತ್ರೆಯಲ್ಲಿ ಕ್ಲಿನಿಕಲ್ ಸೌಲಭ್ಯವನ್ನು ವಿಸ್ತರಿಸಲಾಗಿತ್ತು, ಆದಕಾರಣ ಅವರು ಬೌರಿಂಗ್ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಹೆಚ್ಚಿನ ದಕ್ಷತೆಗಾಗಿ ಅವರನ್ನು ಗೌರವ ವೈದ್ಯಾಧಿಕಾರಿ ಎಂದು ನೇಮಿಸಲಾಗಿತ್ತು, ಅವರು ವಾಸವಾಗಿದ್ದ ವಸತಿಗೃಹವನ್ನು ಕೆಡವಿ ಪುನರ್ ನಿರ್ಮಾಣ ಮಾಡಲು ಅದು ಅರ್ಹವಾಗಿತ್ತು, ಆದ್ದರಿಂದ ವಸತಿಗೃಹದ ಬಾಡಿಗೆಯನ್ನು ಪ್ರಸಕ್ತದ ಮೌಲ್ಯ ಶೂನ್ಯವೆಂದು ಲೋಕೋಪಯೋಗಿ ಇಲಾಖೆ ನಿರ್ಧರಿಸಿತ್ತು, ತತ್ಫಲವಾಗಿ ಅವರು ಲೋಕೋಪಯೋಗಿ ಇಲಾಖೆ ನಿಗದಿಪಡಿಸಿದ್ದ ಸಾಂಕೇತಿಕ ಬಾಡಿಗೆಯನ್ನು ಪಾವತಿಸುತ್ತಿದ್ದರು. ತಾ: 01.01.1977 ರಿಂದ ಜಾರಿಗೆ ಬಂದ ಪರಿಷ್ಕೃತ ವೇತನಶ್ರೇಣಿ ಪ್ರಕಾರ ಅವರ ವೇತನವನ್ನು ಪರಿಷ್ಕರಿಸಿರಲಿಲ್ಲ. ವಸತಿಗೃಹದ ಬಾಡಿಗೆಯನ್ನು 45 ರೂ.ಗಳಿಂದ ಹೆಚ್ಚಿಸಿರಲಿಲ್ಲ. ಅವರು ಕಾರ್ಯನಿರ್ವಹಿಸುತ್ತಿದ್ದ ಕಾಲೇಜಿಗೆ ಕ್ಲಿನಿಕಲ್ ಅಟ್ಯಾಚ್‌ಮೆಂಟ್ ನೀಡಿದ್ದರಿಂದ ವಸತಿಗೃಹವನ್ನು ಮಂಜೂರು ಮಾಡಲಾಗಿತ್ತು, ಅದರಂತೆ ತಾ: 18.07.1986 ರ ಬೌರಿಂಗ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರ ಆದೇಶದಲ್ಲಿ ಅವರಿಗೆ ಸದರಿ ವಸತಿ ಗೃಹವನ್ನು ಮಾಸಿಕ 45 ರೂ.ಗಳ ಬಾಡಿಗೆ ಮೇಲೆ ವಿತರಿಸಲಾಗಿತ್ತು.

೪. ಮೇಲ್ಕಂಡ ವಿವರಣೆಯ ಹಿನ್ನೆಲೆಯಲ್ಲಿ ಅವರು ಯಾವುದೇ ಬಾಡಿಗೆಯ ಬಾಕಿಯನ್ನು ಸಂದಾಯ ಮಾಡಬೇಕಾಗಿಲ್ಲ ಎಂಬುದು ಸ್ಪಷ್ಟವಾಗುವುದರಿಂದ ಈ ಕಡತವನ್ನು ವಿಲೇವಾರಿ ಮಾಡುವಂತೆ ಕೋರಿದ್ದಾರೆ.

೫. ಕೆಸಿಎಸ್ಆರ್‌ಗೆ ಬದ್ಧರಾಗಿರುವುದಾಗಿ ಅವರು ಒಡಂಬಡಿಕೆಪತ್ರ ನೀಡಿದ್ದರ ಪರಿಣಾಮವಾಗಿ ಕಾಲಕಾಲಕ್ಕೆ ಸರ್ಕಾರ ನಿಗಧಿಪಡಿಸಿದ್ದ ಬಾಡಿಗೆಯನ್ನು ಪಾವತಿ ಮಾಡಬೇಕಾಗಿತ್ತೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಪ್ರತಿಪಾದಿಸಿದ್ದಾರೆ. ಡಾ:ಬಿ.ಆರ್. ಅಂಬೇಡ್ಕರ್ ಮೆಡಿಕಲ್ ಕಾಲೇಜಿನ ಕ್ಲಿನಿಕಲ್ ಅಟ್ಯಾಚ್‌ಮೆಂಟ್‌ನ್ನು ಕೆ.ಸಿ.ಜಿ. ಆಸ್ಪತ್ರೆಗೆ ವರ್ಗಾಯಿಸಲಾಗಿತ್ತು, ತಾ: 01.01.88 ರಂದು ಅವರು ವಸತಿಗೃಹವನ್ನು ತೆರವುಮಾಡಬೇಕಾಗಿತ್ತು, ಆದರೆ ಅವರು ಅದನ್ನು ತೆರವುಮಾಡಿರಲಿಲ್ಲ. ತಾ: 01.01.87 ರಿಂದ ಪರಿಷ್ಕೃತ ಮನೆ ಬಾಡಿಗೆ ಸಂದಾಯ ಮಾಡಲು ನಿರ್ದಿಷ್ಟ ಸೂಚನೆ ನೀಡಿದ್ದಾಗ್ಯೂ ಅವರು ಜಮಾ ಮಾಡಿರಲಿಲ್ಲ. ಆದಕಾರಣ ಬಾಡಿಗೆಯ ಪರಿಷ್ಕರಣೆ ಬಾಬ್ತು 40,678 ರೂ.ಗಳನ್ನು ವಸೂಲಿ ಮಾಡುವುದು ಅತ್ಯಗತ್ಯವಾಗಿತ್ತು.

೬. ತಾ: 01.01.87ರಿಂದ ಮಾತ್ರ ಅವರು ಪರಿಷ್ಕೃತ ಮನೆಬಾಡಿಗೆಯನ್ನು ಜಮಾ ಮಾಡಬೇಕಾಗಿತ್ತು, ಇದಕ್ಕೆ ಕಾರಣ ಮೇಲ್ಕಂಡ ವೈದ್ಯಕೀಯ ಕಾಲೇಜಿನ ಕ್ಲಿನಿಕಲ್ ಸೌಲಭ್ಯವನ್ನು ಕೆ.ಸಿ. ಜನರಲ್ ಆಸ್ಪತ್ರೆಗೆ ವರ್ಗಾಯಿಸಿದ್ದರಿಂದ ಅವರು ತಕ್ಷಣ ವಸತಿಗೃಹವನ್ನು ತೆರವುಗೊಳಿಸಬೇಕಾಗಿತ್ತು. ಆದರೆ ತಾ: 25.01.89 ರವರೆಗೆ ತೆರವುಗೊಳಿಸಿರಲಿಲ್ಲ. ಈ ಕಾರಣದಿಂದ ಪರಿಷ್ಕೃತ ಬಾಡಿಗೆಯ ಬಾಕಿಯಾಗಿ ಅವರು 40,678 ರೂ.ಗಳನ್ನು ಅವರಿಂದ ವಸೂಲಾತಿ ಮಾಡಲು ಕ್ರಮ ಕೈಗೊಳ್ಳಲಾಗಿತ್ತು .

೭. ಈಗಾಗಲೇ ಈ ಘಟನೆ ಜರುಗಿ 17 ವರ್ಷಗಳು ಗತಿಸಿದೆ. ಈ ದೀರ್ಘಾವಧಿಯ ನಂತರವು 40,678 ರೂ.ಗಳನ್ನು ಅವರಿಂದ ವಸೂಲು ಮಾಡಲು ಗಂಭೀರವಾದ ಕ್ರಮವನ್ನು ತೆಗೆದುಕೊಳ್ಳಬೇಕಾಗಿರುವುದು ದುರದೃಷ್ಟಕರ. ಅವರೇ ಸ್ವಯಂಪ್ರೇರಿತರಾಗಿ ಅದನ್ನು ಪಾವತಿ ಮಾಡಿದ್ದಲ್ಲಿ ಈ ಪ್ರಸಂಗ ಉದ್ಭವಿಸುತ್ತಿರಲಿಲ್ಲ. ಈ ದೀರ್ಘಾವಧಿಯಲ್ಲಿ ಭೂ ಕಂದಾಯಬಾಕಿ ಶುಲ್ಕದಲ್ಲಿ ಸದರಿ ಮೊತ್ತವನ್ನು ವಸೂಲಿ ಮಾಡುವುದನ್ನು ಕೈಬಿಟ್ಟು, ಅದನ್ನು Waive ಮಾಡುವುದು ಸೂಕ್ತವಾಗುತ್ತದೆಂದು ಪರಿಗಣಿಸಿರುವ ಹಿನ್ನೆಲೆಯಲ್ಲಿ ಸದರಿ ಮೊತ್ತವನ್ನು Waive ಮಾಡಲು ಸರ್ಕಾರಿ ಆದೇಶ ಈ ಕೆಳಗಿನಂತೆ ಹೊರಡಿಸಲು ನಿರ್ಧರಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 260 ಎಂಎಂಸಿ 2004, ಬೆಂಗಳೂರು, ದಿನಾಂಕ: 17 ನೇ ಜನವರಿ 2006**

೮. ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ಹಿಂದಿನ ಗೌರವ ENT ಪ್ರಾಧ್ಯಾಪಕ ಡಾ: ಇಂದಿರಾನರಸಿಂಹನ್ ರವರಿಂದ ಬಾಕಿ ಇರುವ ವಸತಿ ಗೃಹದ ಬಾಡಿಗೆ ಮತ್ತು ದಂಡ ಬಾಡಿಗೆ ರೂ. 40.678.00 (ರೂಪಾಯಿ ನಲವತ್ತು ಸಾವಿರದ ಆರು ನೂರ ಎಪ್ಪತ್ತೆಂಟು ಮಾತ್ರ)ಗಳನ್ನು ವಸೂಲಿ ಮಾಡಲು ಸಾಧ್ಯವಿಲ್ಲವಾದುದರಿಂದ ಮನ್ನಾ ಮಾಡಿ ಆದೇಶಿಸಿದೆ.

೯. ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಕುಕ 807 ಅಂಆಸ 2004 ದಿ: 19.06.2004 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 179

**ಎಸ್.ಎನ್.ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

## ಒಳಾಡಳಿತ ಸಚಿವಾಲಯ

**ವಿಷಯ :** ಬೆಂಗಳೂರು ನಗರದ ಪೋಲೀಸ್ ಇಲಾಖೆಯ ಕಟ್ಟಡಗಳ ದುರಸ್ಥಿ ಹಾಗೂ ನೆಲಸಮಗೊಳಿಸುವುದಕ್ಕೆ ಖಾಸಗಿ ಸಹಭಾಗಿತ್ವವನ್ನು ಪಡೆಯುವ ಬಗ್ಗೆ

**ಓದಲಾಗಿದೆ :** ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್) ಮತ್ತು ಕನ್ವಿನರ್ ರಾಮಲಿಂಗಂ ಕಮಿಟಿ ಬೆಂಗಳೂರು ಇವರ ಪತ್ರ ಸಂಖ್ಯೆ:29/ಐಜಿಪಿ/ಎಟಿಸಿ/ಆರ್‌ಆರ್‌ಸಿ/2005 ದಿನಾಂಕ:29/4/2005

**ಪ್ರಸ್ತಾವನೆ:**

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್) ಮತ್ತು ಕನ್ವಿನರ್ ರಾಮಲಿಂಗಂ ಕಮಿಟಿ ಬೆಂಗಳೂರು ಇವರ ಪತ್ರ ದಿನಾಂಕ:29/4/2005ರಲ್ಲಿ ರಾಜ್ಯದಲ್ಲಿರುವ ಎಲ್ಲಾ ಪೋಲೀಸ್ ಠಾಣೆಗಳು ಕರ್ನಾಟಕ ಸರ್ಕಾರಕ್ಕೆ ಸೇರಿದ್ದು, ಇವುಗಳನ್ನು ಲೋಕೋಪಯೋಗಿ ಇಲಾಖೆ ನಿರ್ವಹಿಸುತ್ತಾ ಬಂದಿದೆ. ಪೋಲೀಸ್ ಠಾಣೆಗಳ ನಿರ್ಮಾಣ, ಕಟ್ಟಡಗಳ ದಿನನಿತ್ಯದ ನಿರ್ವಹಣೆಯನ್ನು ಲೋಕೋಪಯೋಗಿ ಇಲಾಖೆಯು ನಿರ್ವಹಿಸುತ್ತಿದೆ. ಪ್ರತಿ ವರ್ಷ ಪೋಲೀಸ್ ಇಲಾಖೆಯು ಆದ್ಯತೆ ಮೇರೆಗೆ ಪೋಲೀಸ್ ಠಾಣೆಗಳನ್ನು ನಿರ್ಮಿಸುವುದು ಅವುಗಳನ್ನು ನವೀಕರಿಸುವುದು, ಮುಂತಾದವುಗಳನ್ನು ಲಭ್ಯವಿರುವ ಅನುದಾನದಲ್ಲಿ ನಿರ್ವಹಿಸಲಾಗುತ್ತದೆ. ಲೋಕೋಪಯೋಗಿ ಇಲಾಖೆಯು ಕೆಲವು ವರ್ಷಗಳಿಂದ ಅತಿ ಹೆಚ್ಚು ಪೋಲೀಸ್ ಠಾಣೆಗಳನ್ನು ನಿರ್ಮಿಸುತ್ತಾ ಬಂದಿದೆ. ಆದಾಗ್ಯೂ ಅನುದಾನದ ಅಲಭ್ಯತೆಯಿಂದ ಸರ್ಕಾರವು ಕರ್ನಾಟಕ ರಾಜ್ಯ ಪೋಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತವನ್ನು ಸ್ಥಾಪಿಸಿದೆ. ಕರ್ನಾಟಕ ಸರ್ಕಾರವು ಈ ಸಂಸ್ಥೆಗೆ ಹಣಕಾಸು ಸಂಸ್ಥೆಗಳಿಂದ ಹಣವನ್ನು ಸಾಲ ಪಡೆದು ಪೋಲೀಸ್ ಠಾಣೆಗಳನ್ನು ಕಟ್ಟಲು ಅಧಿಕಾರ ನೀಡಿದೆ. ಇದರ ಜೊತೆಗೆ ಕರ್ನಾಟಕ ಭೂಸೇನಾ ನಿಗಮವು ಸಹ ಪೋಲೀಸ್ ಠಾಣೆಗಳನ್ನು ನಿರ್ಮಿಸಿದೆ. ಪ್ರಸ್ತುತ ಪೋಲೀಸ್ ಇಲಾಖೆಯಲ್ಲಿ ಖಾಸಗಿ ಸಂಸ್ಥೆಗಳ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ಕಟ್ಟಲು ರಾಮಲಿಂಗಂ ಕಮಿಟಿ ಪರಿಶೀಲಿಸುತ್ತಿದೆ. ಪೋಲೀಸ್ ಇಲಾಖೆಯಲ್ಲಿ ಪ್ರತಿಯೊಂದು ಸಂದರ್ಭದಲ್ಲಿಯೂ ಪೋಲೀಸ್ ಠಾಣೆಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಹಣದ ಅಭಾವ ತಲೆದೋರುತ್ತದೆ. ಆದ್ದರಿಂದ ಇಲಾಖೆಯು ಆದ್ಯತೆ ಮೇರೆಗೆ ಪೋಲೀಸ್ ಠಾಣೆಗಳನ್ನು ನಿರ್ಮಿಸುವ ವಿಷಯವು ಆದ್ಯತೆ ವಿಷಯವಾಗಿರುತ್ತದೆ.

ಪ್ರಸ್ತುತ ಬಹು ಮುಖ್ಯವಾದ ವಿಷಯವೇನೆಂದರೆ ಪೋಲೀಸ್ ಇಲಾಖೆಯಲ್ಲಿ ಯಾವ ಹಂತದಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ನಿರ್ಮಿಸಬಹುದು. ಎಂಬ ಬಗ್ಗೆ ರಾಮಲಿಂಗಂ ಕಮಿಟಿಯು ಪರಿಶೀಲಿಸಿದೆ. ಅದರಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್), ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ:14:ಪಿಬಿಎಲ್:2005 ಬೆಂಗಳೂರು ದಿನಾಂಕ:15ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪೋಲೀಸ್ ಇಲಾಖೆಯಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ನವೀಕರಣಗೊಳಿಸುವುದು ಹಾಗೂ ಹೊಸದಾಗಿ ನಿರ್ಮಾಣ ಮಾಡುವ ಸಂಬಂಧ ರಾಮಲಿಂಗಂ ಕಮಿಟಿಯ ಕೆಳಕಂಡ ಮಾರ್ಗದರ್ಶಿ ಸೂತ್ರಗಳನ್ನು ಸರ್ಕಾರವು ಒಪ್ಪಿದೆ.

1. All the police buildings belong to the government are vested with the Public Works Department. Any alteration or construction in the Government land should be done with the permission of the Public Works Department. It may be added that no Government land could be utilized without express sanction of the Government.
2. Any building of the government should not be demolished unless it is certified by the Public Works Department as unfit for occupation.
3. If renovations or alterations are required, the plan and estimate should be approved by the PWD.
4. In the case of Police Benevolent Fund also, the department has to take prior permission of Government for accepting contributions from private individuals.
5. As contributions for renovation or construction of police station buildings involve huge sums of money, the antecedent of donors assumes importance. It is the common knowledge that no businessman or individual is going to spend huge sums of money without corresponding returns to himself in some manner or the other. It is for this reason, the Government Departments are prohibited from accepting any financial contribution from private individuals.
6. If it is necessary to take some financial assistance for such construction activities, contributions may be accepted from the reputed public limited companies, such as Infosys, Wipro etc. In such contributions, the police department should also have a prior permission of the Government of Karnataka.
7. The Financial code of the Government of Karnataka is very clear that all activities connected with the financial contribution of private person in Government activity should have an express sanction of the Government.
8. The matter of financial contribution to police buildings will not fall under the purview of better police public relations, as it involves powerful individuals and not the common man.
9. The name of the contributor should not figure anywhere prominently in the police station buildings as donor, except in the plaque along with other names.
10. **Rule-13 of the Karnataka Civil Services (Conduct) Rules, 1966** clearly lays down the provision regarding the acceptance of contributions from the public, which reads, “No Government Servant shall, except with the previous sanction of the Government or of the prescribed authority, ask for or accept contributions to, or otherwise associate himself with the raising of, any funds other collections in cash or in kind in pursuance of any object whatsoever”. Similarly, **Rule-10 of the All India Services (Conduct) Rules, 1968** provides that, “No member of the service shall, except with the previous sanction of the Government or of such authority as may be empowered by it in this behalf ask for, or accept, contributions to or otherwise associate himself with the raising of any fund or other collections in cash or in kind in pursuance of any object whatsoever”.
11. According to PWD (Building Division), a certificate should be obtained from the department regarding the technical opinion about the condition of Government building before demolishing it, which will be issued only after inspecting the building. Wherever alterations to a Government building become necessary, the user department should obtain the revised drawings from the Chief Architect, PWD, Bangalore. Unless these requirements are complied, the Government building cannot be demolished or altered under any circumstances.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ:1:ಟಿಎಫ್‌ಪಿ:2003 ದಿನಾಂಕ:12/6/2003ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 163

**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೋಲೀಸ್ ವೆಚ್ಚ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ದಿ: 19.10.1972.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 214 ಭಾಮಇ 2002, ದಿ:16.9.2003.
3) ದಿನಾಂಕ:2.12.2005 ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರದ ಸಂಖ್ಯೆ:ಜಿಇಎ 2092/2005-06.

**ಪ್ರಸ್ತಾವನೆ:-**

ಉಲ್ಲೇಖ(1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ರಾಜ್ಯ ಮಟ್ಟದ ಹಾಗೂ ಇಲಾಖಾ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸುವ ಬಗ್ಗೆ ಆದೇಶಿಸಲಾಗಿತ್ತು. ಅದರಂತೆ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸಿ ಕಾಲಕಾಲಕ್ಕೆ ಅದನ್ನು ಪುನರ್ ರಚಿಸಲಾಗುತ್ತಿದೆ.

ಉಲ್ಲೇಖ(2) ರಲ್ಲಿ ಓದಲಾಗಿರುವ ದಿ:16.9.2003ರ ಸರ್ಕಾರದ ಆದೇಶದಲ್ಲಿ ರಚಿಸಲಾಗಿರುವ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯ ಎರಡು ವರ್ಷಗಳ ಅವಧಿಯು ದಿ:15.9.2005ಕ್ಕೆ ಮುಕ್ತಾಯಗೊಂಡಿದೆ.

ಉಲ್ಲೇಖ(3)ರಲ್ಲಿ ಓದಲಾದ ದಿ:02.12.2005ರ ತಮ್ಮ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವಂತೆ ಸರ್ಕಾರವನ್ನು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 174 ಈಸಪ 2005, ಬೆಂಗಳೂರು, ದಿ: 17ನೇ ಜನವರಿ 2006**

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯದರ್ಶಿಗಳೊಂದಿಗೆ ನೌಕರರ ಸಂಘದ ಪ್ರತಿನಿಧಿಗಳನ್ನೊಳಗೊಂಡ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಸರ್ಕಾರವು ಪುನರ್ ರಚಿಸಿದೆ.

**ಸರ್ಕಾರದ ಪ್ರತಿನಿಧಿಗಳು**

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ — ಅಧ್ಯಕ್ಷರು
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) — ಸದಸ್ಯರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ — ಸದಸ್ಯರು
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ — ಸದಸ್ಯರು
5. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ — ಸದಸ್ಯರು
6. ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) — ಸದಸ್ಯರು
7. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ — ಸದಸ್ಯರು

**ನೌಕರರ ಸಂಘದ ಪ್ರತಿನಿಧಿಗಳು**

| ಕ್ರ.ಸಂ. | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿ ಪದನಾಮ |
|---|---|---|---|
| 1 | 2 | 3 | 4 |
| 1 | ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಭೂಮಾಪನಾ, ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ | ಸದಸ್ಯರು |
| 2 | ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |
| 3 | ಖಜಾಂಚಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 4 | ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗಾಂಧಿನಗರ, ಬೆಂಗಳೂರು. | ಪ್ರಾಥಮಿಕ ಶಿಕ್ಷಣ | ಸದಸ್ಯರು |
| 5 | ಅಧ್ಯಕ್ಷರು, ಕರ್ನಾಟಕ ರಾಜ್ಯ ಡಿ ಗ್ರೂಪ್ ನೌಕರರ ಕೇಂದ್ರ ಸಂಘ, ಬಹುಮಹಡಿ ಕಟ್ಟಡ, ಬೆಂಗಳೂರು. | ಲೋಕೋಪಯೋಗಿ ಇಲಾಖೆ | ಸದಸ್ಯರು |
| 6 | ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ, ಕೆ.ಕೆ.ಗೆಸ್ಟ್‌ಹೌಸ್ ಆವರಣ ಹೈಗ್ರೌಂಡ್ಸ್, ಬೆಂಗಳೂರು. | ಪಶುಪಾಲನಾ ಇಲಾಖೆ | ಸದಸ್ಯರು |

| 1 | 2 | 3 | 4 |
|---|---|---|---|
| 7 | ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ತುಮಕೂರು. | ಕಂದಾಯ ಇಲಾಖೆ | ಸದಸ್ಯರು |
| 8 | ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಮೈಸೂರು. | ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | ಸದಸ್ಯರು |
| 9 | ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ ಬೀದರ್. | ಆರೋಗ್ಯ ಇಲಾಖೆ. | ಸದಸ್ಯರು |
| 10 | ಶ್ರೀ ಎನ್.ಎಂ.ಪುಟ್ಟಸ್ವಾಮಯ್ಯ, ಪ್ರಥಮ ದರ್ಜೆ ಸಹಾಯಕರು, ಕೃಷಿ ನಿರ್ದೇಶನಾಲಯ, ಬೆಂಗಳೂರು. | ಕೃಷಿ ಇಲಾಖೆ | ಸದಸ್ಯರು |
| 11 | ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಕಾರವಾರ(ಉತ್ತರ ಕನ್ನಡ). | ಖಜಾನೆ ಇಲಾಖೆ | ಸದಸ್ಯರು |
| 12 | ಶ್ರೀಮತಿ ಖಾನಿಜಾ ಕಾಕಡಿ, ಟ್ಯೂಟರ್, ಕಾಲೇಜ್ ಆಫ್ ನರ್ಸಿಂಗ್, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು. | ಆರೋಗ್ಯ ಇಲಾಖೆ | ಸದಸ್ಯರು |

2. ಜಂಟಿ ಸಮಾಲೋಚನಾ ಸಮಿತಿಯ ಅಧ್ಯಕ್ಷರು ಸಮಿತಿಯ ಮೊದಲನೆಯ ಸಭೆಯಲ್ಲಿ ಸದಸ್ಯರೊಡನೆ ಸಮಾಲೋಚಿಸಿ, ಸದಸ್ಯರಲೊಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸುವರು.

3. ಈ ಪುನರ್ ರಚಿಸಲಾದ ಜಂಟಿ ಸಮಾಲೋಚನಾ ಸಮಿತಿಯು ದಿ:19.10.1972ರಲ್ಲಿನ ಸರ್ಕಾರದ ಆದೇಶದ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69ರ ನಿಯಮ 7(ಬಿ)ರ ಪ್ರಕಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು(2) ವರ್ಷಗಳ ಅವಧಿಯವರೆಗೆ ಇರುತ್ತದೆ.

4. ಸಮಿತಿಯ ವ್ಯವಹಾರಗಳನ್ನು ದಿ:19.10.1972ರ ಸರ್ಕಾರದ ಆದೇಶದ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ಮತ್ತು ತದನಂತರದ ತಿದ್ದುಪಡಿಗಳಿಗನುಗುಣವಾಗಿ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 206

**ಎಸ್.ಆರ್.ಹಿರೇಮಠ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇ.(ಕಾರ್ಯಾಧ್ಯಯನ-2)

## ವಸತಿ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ ಮಾಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೋಲಾರ ಜಿಲ್ಲೆ, ಮಾಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/12/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 23ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಕೋಲಾರ ಜಿಲ್ಲೆ, ಮಾಲೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಸುನಂದಮ್ಮ — ಸದಸ್ಯರು
   ಹನುಮಂತ ನಗರ, ಮಾಲೂರು, ಕೋಲಾರ ಜಿಲ್ಲೆ.
2. ಶ್ರೀ ಎಂ.ಸಿ. ವೆಂಕಟೇಶ್ — ಸದಸ್ಯರು
   ಚಿಕ್ಕ ಮಾರಮ್ಮ ದೇವಸ್ಥಾನ ರಸ್ತೆ, ಮಾಲೂರು, ಕೋಲಾರ ಜಿಲ್ಲೆ.
3. ಶ್ರೀ ಶೇಕ್ ಬಾಬು ಸಾಬ್ — ಸದಸ್ಯರು
   ಮಟನ್ ಮಾರ್ಕೆಟ್ ರಸ್ತೆ, ಮಾಲೂರು, ಕೋಲಾರ ಜಿಲ್ಲೆ.
4. ಶ್ರೀ ಎಂ.ಸಿ. ರವಿ — ಸದಸ್ಯರು
   ರೈಲ್ವೆ ಫೀಡರ್ ರಸ್ತೆ, ಮಾಲೂರು, ಕೋಲಾರ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 226

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ :** ಉತ್ತರ ಕನ್ನಡ ಜಿಲ್ಲೆ ಅಂಕೋಲಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಉತ್ತರ ಕನ್ನಡ ಜಿಲ್ಲೆ, ಅಂಕೋಲಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/17/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ : 21ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಉತ್ತರ ಕನ್ನಡ ಜಿಲ್ಲೆ, ಅಂಕೋಲಾ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಆನಂದು ದೊಡತಮ್ಮಾ ಬಂಡಕೇಣಿ — ಸದಸ್ಯರು
   ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.
2. ಶ್ರೀ ಸೂರೂದ್ದೀನ್ ಎಂ.ಶೇಖ್ — ಸದಸ್ಯರು
   ಕೌಕರವ್ಮಠ, ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.
3. ಶ್ರೀಮತಿ ರಮಾ ಮುರ್ಕುಂಟನಾಯ್ಕ — ಸದಸ್ಯರು
   ಕೌಕರವ್ಮಠ, ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.
4. ಶ್ರೀ ಮಂಗೇಶ್ ಹನುಮಗೌಡ — ಸದಸ್ಯರು
   ಹುಲದೇವರವಾಡ, ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 227

**ಎಸ್. ಇಂದುಮತಿ**
ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ :** ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕು, ಬನ್ನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು, ಬನ್ನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/07/ಹೆಚ್‌ಎಎಸ್2006, ಬೆಂಗಳೂರು, ದಿನಾಂಕ : 23ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ಟಿ.ನರಸೀಪುರ ತಾಲ್ಲೂಕು, ಬನ್ನೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಶಿವಮ್ಮ, ಕೋಂ.ಶಿವಣ್ಣ — ಸದಸ್ಯರು
   ಕೆ.ಇ.ಬಿ. ರಸ್ತೆ, ಬನ್ನೂರು ಟೌನ್, ಬನ್ನೂರು,
   ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.
2. ಶ್ರೀ ಅರಕೇಶ ಬಿನ್. ಅಂಕಯ್ಯ — ಸದಸ್ಯರು
   ಕೊನೇಬೀದಿ ಮಾರನಹಳ್ಳಿ, ಬನ್ನೂರು ಟೌನ್,
   ಬನ್ನೂರು, ಮೈಸೂರು ಜಿಲ್ಲೆ.
3. ಶ್ರೀ ಯೂಸೂಫ್ ಬಿನ್ ಮಹಮ್ಮದ್ ಅಮೀನ್ — ಸದಸ್ಯರು
   ಮಾಜಿ ಪುರಸಭಾ ಉಪಾಧ್ಯಕ್ಷರು, ರತ್ನಮಾಲಾ ಚಿತ್ರ ಮಂದಿರ ಹತ್ತಿರ
   ಬಿಸ್ಮಿಲ್ಲಾ ನಗರ, ಬನ್ನೂರು ಟೌನ್, ಮೈಸೂರು ಜಿಲ್ಲೆ.
4. ಶ್ರೀ ಬಿ.ಕೆ. ಸಿದ್ದೇಗೌಡ, ಬಿನ್ ಕೆಂಚೇಗೌಡ — ಸದಸ್ಯರು
   ಸರ್ಕಾರಿ ಸಾರ್ವಜನಿಕ ಆಸ್ಪತ್ರೆಯ ಮುಂಭಾಗ
   ಎಸ್.ಆರ್.ಪಿ. ರಸ್ತೆ, ಬನ್ನೂರು ಟೌನ್, ಬನ್ನೂರು, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 225

**ಎಸ್. ಇಂದುಮತಿ**
ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ :** ಧಾರವಾಡ ಜಿಲ್ಲೆ ಹುಬ್ಬಳ್ಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ:10.04.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಧಾರವಾಡ ಜಿಲ್ಲೆ, ಹುಬ್ಬಳ್ಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ :ವಇ/04/ಹೆಚ್‌ಎಎಸ್2006, ಬೆಂಗಳೂರು, ದಿನಾಂಕ : 21ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಧಾರವಾಡ ಜಿಲ್ಲೆ, ಹುಬ್ಬಳ್ಳಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ರಾಕೇಶ್ ಬಸವರಾಜ — ಸದಸ್ಯರು
   ತಬಿಬ ಲ್ಯಾಂಡ್, ಹುಬ್ಬಳ್ಳಿ, ಧಾರವಾಡ ಜಿಲ್ಲೆ
2. ಶ್ರೀಮತಿ ರಾಜಮ್ಮ ಬಿಲಾನ್ — ಸದಸ್ಯರು
   ಬಂಕಾಪುರ ಚೌಕ ಹತ್ತಿರ, ಹುಬ್ಬಳ್ಳಿ, ಧಾರವಾಡ ಜಿಲ್ಲೆ
3. ಶ್ರೀ ಅಲ್ಲಾಬಕಷ ಲಕ್ಕಡಹಾರೆ — ಸದಸ್ಯರು
   ಎಸ್.ಎಂ. ಕೃಷ್ಣಾ ನಗರ, ಆಶ್ರಯ ಬಡಾವಣೆ
   ಹಳೇ ಹುಬ್ಬಳ್ಳಿ, ಧಾರವಾಡ ಜಿಲ್ಲೆ
4. ಶ್ರೀ ರವಿ ಸಂಗಳಕರ್ — ಸದಸ್ಯರು
   ಹುಗಾರ ಓಣಿ, ಗಾರ್ಡನ್ ಪೇಟೆ, ಹುಬ್ಬಳ್ಳಿ, ಧಾರವಾಡ ಜಿಲ್ಲೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

ಪಿ.ಆರ್. 224

**ಎಸ್. ಇಂದುಮತಿ**
ಪೀಠಾಧಿಕಾರಿ–2, ವಸತಿ ಇಲಾಖೆ.

## ENERGY SECRETARIAT

**Sub :** Enhancement of allotted capacity of Wind Power Project (Wind Mill Project) from 7 MW to 27.5 MW in favour of M/s Sarjan Realities Limited-reg.

**Read :**
1. Government Order No : DE 59 NCE 2004, dated : 8.3.2004.
2. Letter No : KRED / 08 / SRPL / 2006 / 240, dated : 27.01.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) above, the sanction has been accorded to implement 7 MW capacity Wind Power Project (Wind Mill Project) at Katenahalli village in Haveri District to M/s Sarjan Realities Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (2) above has recommended to Government to enhance the capacity from 7 MW to 27.5 MW.

The proposal has been examined at Government level and hence the following order :

**Government Order No : EN 64 NCE 2006, Bangalore, Dated : 08th February 2006.**

Government is pleased to accord sanction to M/s Sarjan Realities Limited, for enhancement of the capacity of Wind Power Project (Wind Mill Project) from 7 MW to 27.5 MW at 4 ridges oriented in NW-SE directions with peaks 754, 787 and 785 are located on the northeast of Katenhalli village and are bounded by the corresponding geographical co-ordinates (Longitude from–$75^0$ 24' 50" to $75^0$ 28' 40" and Latitude- $14^0$ 35' 30" to $14^0$ 37' 40") in Haveri District to M/s Sarjan Realities Limited.

The other terms and conditions of the allotment order shall continue as it is.

By Order and in the name of the
Governor of Karnataka,

P.R. 241

**SURESH. B. KRISHNAPPANAVAR**
Under Secretary to Government, Energy Department.

**Sub :** Enhancement of allotted capacity of Wind Power Project from 5.2 MW to 36 MW in favour of M/s Fiza Developer and Inter Trade Private Limited -reg.

**Read :**
1. Government Order No : EN 315 NCE 2005, dated : 19.10.2005.
2. Letters No : KRED/08/FIZA/2005/74, dated : 6/10.01.2006 and No: KRED/08/SIL-JGM/2006/312 dated: 7/10.2.2006. received from the Managing Director, Karnataka Renewable Energy Development Limited, Bangalore.
3. Government Order No: EN 27 NCE 2006 dated: 10.2.2006.

**PREAMBLE:**

In the Government order read at (1) above, the sanction has been accorded for transfer of 7.2 MW capacity Wind Power Project at Jogimatti and Kasavinahalli in Chitradurga District from M/s Fiza Developer and Inter Trade Private Limited to M/s Suzlon Infrastructure Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (2) above has recommended to Government to transfer 5.2 MW capacity out of sanctioned 7.2 MW to M/s Fiza Developers and Inter Trade Private Limited from M/s Suzlon Infrastructure Limited. Further, he has recommended to enhance the capacity to 36 MW from its sanctioned 5.2 MW (7.2MW-2MW=5.2MW) Wind Power capacity at Jogimatti and Kasavanahalli village in Chitradurga District to M/s Fiza Developer and Inter Trade Private Limited.

In Government Order read at (3) above sanction has been accorded for transfer of 5.2 MW (7.2 MW-2 MW=5.2 MW) out of sanctioned capacity of 7.2 MW from M/s Suzlon Infrastructure Limited to M/s Fiza Developer and Inter Trade Private Limited.

The proposal has been examined at Government level and hence the following order :

**Government Order No : EN 6 NCE 2006, Bangalore, Dated : 10th February 2006.**

Government is pleased to accord approval for enhancement capacity from 5.2 MW to 36 MW to M/s Fiza Developer and Inter Trade Private Limited at Jogimatti and Kasavanahalli in Chitradurga District as detailed below :-

The details of enhancement capacity from 5.2 MW to 36 MW capactiy to M/s Fiza Developer and Inter Trade Private Limited is as under :-

| Name of the place | Sanctioned Capacity | Description of the Area |
|---|---|---|
| Jogimatti and Kasavanahalli Chitradurga District | 36 MW | Area 'A' : it is earmarked in an distorted large 'U' shape and its external features shows depicts that it is an open scrub and open jungle. It is situated in the Jogimatti State Forest. The area is held in the following Geographical Co-ordinates:<br>**Latitude: $14^0$ 8' 52''-$14^0$ 10' 52'' N**<br>**Longitude: $76^0$ 20' 33''-$76^0$ 22' 45'' E**<br>**Ridge Peaks: 906m Amsl**<br>Area 'B' (9 MW): About 1 Km length ridge oriented in a North-West, South-East direction and is situated in the north of Kasavanahalli village. The proposed area is covered in the following Geographical Co-ordinates:<br>**Latitude: $14^0$ 4' 7''-$14^0$ 5' 5'' N**<br>**Longitude: $76^0$ 20' 18''-$76^0$ 21' 13'' E**<br>**Ridge Peaks: 1054m Amsl** |

The other terms and conditions of the allotment order shall continue as it is.

By Order and in the name of the Governor of Karnataka,
**SURESH. B. KRISHNAPPANAVAR**
Under Secretary to Government, Energy Department.

P.R. 243

**Sub :** Permission to transfer of 20 MW Tunga Mini Hydel Project and 1.3 MW Anveri Mini Hydel Project in favour of M/s Brindavan Hydro Power Private Limited from M/s Danddeli Ferro Private Limited–reg.

**Read :**
1. Government order No: DE 84 PPC 1992 dated: 20.07.1992.
2. Government order No: DE 154 PPC 1994 (3) dated: 6.9.1994.
3. Letter No. KRED/06/Tunga/2005/269 dated : 1.2.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated: 20.07.1992 read at (1) above, sanction has been accorded for implementation of 1.3 MW capacity Anveri Mini Hydel Power Project to M/s Dandeli Steel and Ferro Alloys Limited (Now M/s Danddeli Ferro Private Limited).

In Government Order dated: 6.9.1994 read at (2) above sanction has been accorded for implementation of 20 MW capacity Tunga Mini Hydel Power Project M/s Dandeli Steel and Ferro Alloys Limited (Now M/s Danddeli Ferro Private Limited).

Now, the Managing Director, Karnataka Renewable Energy Development Limited, Bangalore in his letter dated : 1.2.2006 read at (3) above, has recommended for transfer of 1.3 MW Anveri Mini Hydel Power Project and 20 MW Tunga Mini Hydel Power Project in favour of M/s Brindavan Hydro Power Private Limited from M/s Danddeli Ferro Private Limited, since M/s Danddeli Ferro Private Limited was declared a sick industry Under Sick Industrial Companies (Special Provisions) Act 1985 and was registered with Board For Industrial And Financial Reconstruction (BIFR). Further this court requires the company to transfer these two Mini Hydel Power Projects i.e Anveri Mini Hydel Power Project and Tunga Mini Hydel Power Project from M/s Danddeli Ferro Private Limited to M/s Brindavan Hydro Power Private Limited an associated subsidiary of M/s Danddeli Ferro Private Limited. The proposal has been examined and pass the following order.

**GOVERNMENT ORDER NO: EN 68 NCE 2006, BANGALORE, DATED: 06th FEBRUARY 2006.**

Government is pleased to accord sanction for transfer of 1.3 MW capacity Anveri Mini Hydel Power Project and 20 MW capacity Tunga Mini Hydel Power Project in favour of M/s Brindavan Hydro Power Private Limited from M/s Danddeli Ferro Private Limited. All the Clearences, Approvals and Agreements made in favour of M/s Danddeli Ferro Private Limited shall be applicable to M/s Brindavan Hydro Power Private Limited.

The terms and conditions of the Government Order read at (1) and (2) above, shall **IPSO FACTO** applicable.

By Order and in the name of the
Governor of Karnataka,

P.R. 216

**SURESH. B. KRISHNAPPANAVAR**
Under Secretary to Government, Energy Department.

**Sub :** Transfer of 1.4 MW Rayabasavanna Mini Hydel Power Project in favour of M/s. Khandaleru Power Company Limited –reg.

**Read :**
1. Government order No: EN 277 NCE 2004 dated: 10.9.2004.
2. Letter No. KRED/06/Rayabasavanna/2005/150 dated : 17/18.01.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated: 10.9.2004 read at (1) above, sanction has been accorded for implementation of 2 MW capacity Mini Hydel Power Project at Rayabasavanna canal, Right Bank of Tungabhadra Dam, Hospet Taluk, Bellary District to M/s NCL Energy Limited.

Now, the Managing Director, Karnataka Renewable Energy Development Limited, Bangalore in his letter dated : 17/18.01.2006 read at (2) above, has recommended for transfer of 1.4 MW Rayabasavanna canal Mini Hydel Power Project in favour of M/s. Khandaleru Power Company Limited. As per the assessment of the developer and subsequent vetting by Karnataka Renewable Energy Development Limited, it is observed that it is possible to implement 1.4 MW capacity only as against sanctioned capacity of 2 MW. The proposal has been examined and pass the following order.

**GOVERNMENT ORDER NO: EN 30 NCE 2006, BANGALORE, DATED 25th JANUARY 2006.**

Government is pleased to accord sanction for transfer of 1.4 MW capacity Rayabasavanna canal Mini Hydel Power Project in favour of M/s. Khandaleru Power Company Limited at Rayabasavanna canal, Right Bank of Tungabhadra Dam, Hospet Taluk, Bellary District from M/s NCL Energy Limited.

The terms and conditions of the Government Order read at (1) above, shall **IPSO FACTO** applicable.

By Order and in the name of the
Governor of Karnataka,

P.R. 157

**SURESH. B. KRISHNAPPANAVAR**
Under Secretary to Government, Energy Department.